KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

ಸಂಪುಟ ೧೪೬ | ಬೆಂಗಳೂರು, ಗುರುವಾರ, ಏಪ್ರಿಲ್ ೧೪, ೨೦೧೧, (ಚೈತ್ರ ೨೪, ಶಕ ವರ್ಷ ೧೯೩೩) | ಸಂಚಿಕೆ ೧೫

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಪ್ರದೀಪ್ ಸಿಂಗ್ ಖರೋಲಾ, ವಾಣಿಜ್ಯ ತೆರಿಗೆ ಇಲಾಖೆ ಅಯುಕ್ತರು ಇವರು 'ಚಾಲೆಂಜ್ ಫಂಡ್' ಯೋಜನೆಯಡಿ ಸಲ್ಲಿಸಿರುವ 'Development of Prototype of a Garbage lifting mechanism' ಎಂಬ ವಿಷಯದಲ್ಲಿ ಸಲ್ಲಿಸಿರುವ ಪೈಲೆಟ್ ಪ್ರಾಜಕ್ಟನ್ನು ಅನುಷ್ಠಾನಗೊಳಿಸಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 92 ಇಆಸು 2009, ದಿನಾಂಕ : 08–07–2010
2. ಶ್ರೀ ಪ್ರದೀಪ್ ಸಿಂಗ್ ಖರೋಲಾ, ವಾಣಿಜ್ಯ ತೆರಿಗೆ ಇಲಾಖೆ ಆಯುಕ್ತರು ಇವರ ಅ.ಸ. ಪತ್ರ ಸಂಖ್ಯೆ : ಸಿಸಿಟಿ/ಎಂಐಎಸ್‌ಸಿ/2010–2011, ದಿನಾಂಕ : 24–07–2010
3. ಶ್ರೀ ಪ್ರದೀಪ್ ಸಿಂಗ್ ಖರೋಲಾ, ವಾಣಿಜ್ಯ ತೆರಿಗೆ ಇಲಾಖೆ ಆಯುಕ್ತರು ಇವರ ಅ.ಸ. ಪತ್ರ ಸಂಖ್ಯೆ ಸಿಸಿಟಿ/ಎಂಐಎಸ್‌ಸಿ/2010–11, ದಿನಾಂಕ : 02–09–2010
4. ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಏರ್ಪಡಿಸಿದ್ದ ದಿನಾಂಕ : 12–10–2010ರ ಉನ್ನತಾಧಿಕಾರ ಸಮಿತಿ ಸಭೆಯ ನಡೆವಳಿಗಳು
5. ಆರ್ಥಿಕ ಇಲಾಖೆಯ ಅಧಿಸೂಚನೆ ಸಂಖ್ಯೆ : ಆಇ 1011 ವೆಚ್ಚ : 12/10, ದಿನಾಂಕ : 19–01–2011

**ಪ್ರಸ್ತಾವನೆ :**

ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸೃಜನಾತ್ಮಕವಾದ ಹಾಗೂ ಪರಿಣಾಮಕಾರಿಯಾದ ಯೋಜನೆಗಳನ್ನು ಸರ್ಕಾರದ ಇಲಾಖೆಗಳು ಹಾಗೂ ಸಂಸ್ಥೆಗಳಲ್ಲಿ ಜಾರಿಗೆ ತರುವ ಸಲುವಾಗಿ "ಚಾಲೆಂಜ್ ಫಂಡ್" ಯೋಜನೆಯನ್ನು ಸ್ಥಾಪಿಸಲಾಗಿದೆ. ಪ್ರಸ್ತುತ ಇರುವ ಸೇವೆಯಲ್ಲಿ ಗುಣಮಟ್ಟವನ್ನು ಉತ್ತಮಗೊಳಿಸುವುದು; ಸೇವೆಯನ್ನು ನೀಡುವಲ್ಲಿ ವೆಚ್ಚವನ್ನು ಕಡಿತಗೊಳಿಸುವುದು; ಜನರ ಅನುಕೂಲಕ್ಕಾಗಿ ಹೊಸ ಸಾರ್ವಜನಿಕ ಸೇವೆಯನ್ನು ಆರಂಭಿಸುವುದು ; ಆಡಳಿತ/ ನಿರ್ವಹಣೆಯನ್ನು ಉತ್ತಮಗೊಳಿಸುವುದು; ಸಂಪನ್ಮೂಲ ಸಂಗ್ರಹದಲ್ಲಿ ಪ್ರಗತಿ ಅಥವಾ ಸಂಪನ್ಮೂಲಗಳ ಹೊಸ ಮೂಲವನ್ನು ಒದಗಿಸುವುದು; ಸೃಜನಾತ್ಮಕವಾದ ಅಂಶ ಅಥವಾ ತಂತ್ರಜ್ಞಾನ ಹೊಂದಿದ ಉತ್ತಮ ಪೈಲೆಟ್ ಪ್ರಾಜೆಕ್ಟ್‌ಗಳನ್ನು ಆಹ್ವಾನಿಸುವುದು ; ಇವುಗಳು ಸದರಿ ಚಾಲೆಂಜ್ ಫಂಡ್ ಯೋಜನೆಯ ಮುಖ್ಯ ಉದ್ದೇಶಗಳಾಗಿರುತ್ತವೆ. ಈ ಯೋಜನೆಯಡಿ ಸಲ್ಲಿಸಲಾಗುವ ಪೈಲಟ್ ಪ್ರಾಜೆಕ್ಟ್‌ನ್ನು ಅನುಷ್ಠಾನಗೊಳಿಸಲಾದ ನಂತರ ಈ ಪೈಲಟ್ ಪ್ರಾಜೆಕ್ಟ್‌ಗಳನ್ನು ಸಲ್ಲಿಸಿದ್ದ ಸಂಬಂಧಪಟ್ಟ ಅಧಿಕಾರಿಗಳು/ತಂಡ/ಸರ್ಕಾರಿ ಸಂಘ ಸಂಸ್ಥೆಗಳಿಗೆ ನಿಯಮಾನುಸಾರ ಪ್ರಶಸ್ತಿ ನೀಡಲು ಸದರಿ ಯೋಜನೆಯಡಿ ಆಸ್ಪದ ಕಲ್ಪಿಸಲಾಗಿದೆ.

ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಪ್ರದೀಪ್ ಸಿಂಗ್ ಖರೋಲಾ, ಆಯುಕ್ತರು, ವಾಣಿಜ್ಯ ತೆರಿಗೆ ಇಲಾಖೆ ಇವರು 'Development of Prototype of a Garbage lifting mechanism; ಎಂಬ ವಿಷಯದಲ್ಲಿ, ವೈಯಕ್ತಿಕ ವರ್ಗದಲ್ಲಿ (Individual Category) ರಡಿ ಪ್ರಸ್ತಾವನೆ ಸಲ್ಲಿಸಿದ್ದು, ಇದನ್ನು 'ಚಾಲೆಂಜ್ ಫಂಡ್' ಯೋಜನೆಯಡಿ ಜಾರಿಗೊಳಿಸಬೇಕಾಗಿ ಕೋರಿದ್ದಾರೆ. ಸದರಿ ಪ್ರಸ್ತಾವನೆಯಲ್ಲಿ, ಮಾನವ ಶಕ್ತಿಯ ಸಹಾಯವಿಲ್ಲದೆ, ಈ ಯೋಜನೆಯಡಿ ತಯಾರಿಸಲು ಉದ್ದೇಶಿಸಿರುವ ಯಂತ್ರವನ್ನು ಬಳಸಿ, ನೇರವಾಗಿ ರಸ್ತೆ ಬದಿಯ ಕಸವನ್ನು ಎತ್ತಲು ಹಾಗೂ ಅದನ್ನು ಕಸದ ವಾಹನದಲ್ಲಿ ತುಂಬಿ ಅದನ್ನು 'ಕಸದ ತೊಟ್ಟಿಗೆ' ರವಾನಿಸುವ ಸ್ವಯಂಚಾಲಿತ ಯಂತ್ರದ ಬಗ್ಗೆ ಸದರಿ ಅಧಿಕಾರಿಯವರು ವಿವರ ನೀಡಿರುತ್ತಾರೆ. ವಿದೇಶಗಳಲ್ಲಿ ಈ ವಿಧಾನವನ್ನು ಬಳಸುತ್ತಿದ್ದು, ಈಗಿರುವ ವ್ಯವಸ್ಥೆಗಿಂತ ಕಡಿಮೆ ವೆಚ್ಚದಲ್ಲಿ ಹಾಗೂ ಸ್ವಚ್ಛವಾಗಿ ಕೆಲಸ ನಿರ್ವಹಿಸಲು ಸದರಿ ಯಂತ್ರವನ್ನು ಬಳಸಬಹುದಾಗಿದೆಯೆಂದು ಸಹ ಸದರಿ ಅಧಿಕಾರಿಯವರು ತಿಳಿಸಿರುತ್ತಾರೆ. ಈ ಪೈಲಟ್ ಪ್ರಾಜೆಕ್ಟ್‌ನ್ನು ಜಾರಿಗೊಳಿಸಲು ರೂ. 10.00 ಲಕ್ಷಗಳ ವೆಚ್ಚ ತಗಲಲಿದ್ದು, ಈ ಸಂಬಂಧ ಕೋರಿರುವ ಸದರಿ ರೂ. 10.00 ಲಕ್ಷಗಳ (ಹತ್ತು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಬಿಎಂಟಿಸಿ/ಕೆಎಸ್‌ಆರ್‌ಟಿಸಿ ಸಂಸ್ಥೆಗೆ ಮಂಜೂರು ಮಾಡಿ, ಅದನ್ನು ಈ ಸಂಸ್ಥೆಯ ಮುಖಾಂತರ ಖರ್ಚು ಮಾಡಬಹುದೆಂದು, ಹಾಗೂ ಈ ಪ್ರಸ್ತಾವನೆಗೆ ಅಗತ್ಯವಿರುವ machines/tools/equipments ಮುಂತಾದವುಗಳನ್ನು ಬಿಎಂಟಿಸಿ ಸಂಸ್ಥೆಗಳಲ್ಲಿ ಅವುಗಳ ಖರೀದಿಗಾಗಿ ಆ ಸಂಸ್ಥೆಗಳು ನಿಗಧಿಪಡಿಸಿರುವ ನಿಯಮಗಳನ್ವಯ

ಖರೀದಿಸಬಹುದು ಎಂದು ತಿಳಿಸಿರುತ್ತಾರೆ. ಇದರಿಂದಾಗಿ, ಈ ಪ್ರಸ್ತಾವನೆಗೆ ಕೆಟಿಪಿಪಿ ಅಧಿನಿಯಮದಿಂದ ವಿನಾಯಿತಿ ಕೋರುವ ಅವಶ್ಯಕತೆ ಇರುವುದಿಲ್ಲವೆಂದು ತಿಳಿಸುತ್ತಾ, ಈ ಪೈಲಟ್ ಪ್ರಾಜೆಕ್ಟ್‌ನ್ನು ಅನುಷ್ಠಾನಗೊಳಿಸುವುದರಿಂದ ಸಾರ್ವಜನಿಕರಿಗೆ ಹಾಗೂ ಕಸವನ್ನು ಎತ್ತುವ ನಿಟ್ಟಿನಲ್ಲಿ ಆಗಬಹುದಾದ ಅನುಕೂಲಗಳ ಬಗ್ಗೆ ವಿವರಗಳನ್ನು ಸದರಿ ಅಧಿಕಾರಿಯವರು ನೀಡಿರುತ್ತಾರೆ.

ಅದರಂತೆಯೇ, ದಿನಾಂಕ : 12–10–2010ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಉನ್ನತಾಧಿಕಾರದ ಸಮಿತಿಯ ಸಭೆಯಲ್ಲಿ ಮುಂದೆ ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಚರ್ಚಿಸಲಾದ ನಂತರ, ಈ ಪ್ರಸ್ತಾವನೆಯ ಸಂಬಂಧ ಸದರಿ ಅಧಿಕಾರಿಯವರು ಸಲ್ಲಿಸಿರುವ ಪೈಲಟ್ ಪ್ರಾಜೆಕ್ಟ್‌ನ್ನು ಅನುಷ್ಠಾನಗೊಳಿಸಲು ಸಮಿತಿಯು ನಿರ್ಣಯಿಸಿತು.

ಈ ಪ್ರಸ್ತಾವನೆಗೆ ಅಗತ್ಯವಿರುವ machines/tools/equipments ಮುಂತಾದವುಗಳನ್ನು ಬಿಎಂಟಿಸಿ ಸಂಸ್ಥೆಗಳಲ್ಲಿ ಅವುಗಳ ಖರೀದಿಗಾಗಿ ಆ ಸಂಸ್ಥೆಯು ನಿಗಧಿಪಡಿಸಿರುವ ನಿಯಮಗಳನ್ವಯ ಖರೀದಿಸಲು ಅನುವಾಗಲು ಕೆಟಿಪಿಪಿ ಅಧಿನಿಯಮದಡಿ ವಿನಾಯಿತಿ ನೀಡುವಂತೆ ಆರ್ಥಿಕ ಇಲಾಖೆಯನ್ನು ಕೋರಲಾಗಿದ್ದು, ಆರ್ಥಿಕ ಇಲಾಖೆಯು ಮೇಲೆ (5) ರಲ್ಲಿ ಓದಲಾದ ಅಧಿಸೂಚನೆಯಲ್ಲಿ, ಈ ಪೈಲಟ್ ಪ್ರಾಜೆಕ್ಟ್‌ಗೆ ಅಗತ್ಯವಿರುವ machines/tools/equipments ಮುಂತಾದವುಗಳನ್ನು ನೇರವಾಗಿ ಬಿಎಂಟಿಸಿ ವರ್ಕ್ ಶಾಪ್‌ನಿಂದ ಸಂಗ್ರಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಈ ಪ್ರಸ್ತಾವನೆಯ ಸಂಬಂಧ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಡಿ ವಿನಾಯಿತಿ ನೀಡಿರುತ್ತದೆ.

ಆದ್ದರಿಂದ, ಮೇಲ್ಕಂಡ ಹಿನ್ನೆಲೆಯಲ್ಲಿ ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾದ ನಂತರ, ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 78 ಇಆಸು 2010, ಬೆಂಗಳೂರು, ದಿನಾಂಕ : 1ನೇ ಫೆಬ್ರವರಿ 2011**

ಶ್ರೀ ಪ್ರದೀಪ್ ಸಿಂಗ್ ಖರೋಲಾ, ಆಯುಕ್ತರು, ವಾಣಿಜ್ಯ ತೆರಿಗೆ ಇಲಾಖೆ ಇವರು 'ಚಾಲೆಂಜ್ ಫಂಡ್, ಯೋಜನೆಯಡಿ 'Development of Prototype of a Garbage lifting mechanism' ಎಂಬ ವಿಷಯದಲ್ಲಿ ಸಲ್ಲಿಸಿರುವ ಪೈಲಟ್ ಪ್ರಾಜೆಕ್ಟ್‌ನ್ನು ಅನುಷ್ಠಾನಗೊಳಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ. ಈ ಪ್ರಸ್ತಾವನೆಗೆ ತಗಲುವ ವೆಚ್ಚವನ್ನು 2010–2011ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ "2070–00–800–0–15–059 ಆಡಳಿತ ಸುಧಾರಣೆ–ಸವಾಲುನಿಧಿ ಇತರೆ ಖರ್ಚು (ಯೋಜನೇತರ) ಅಡಿ ಒದಗಿಸಿರುವ ಅನುದಾನದಲ್ಲಿ ರೂ. 10.00 ಲಕ್ಷಗಳನ್ನು (ಹತ್ತು ಲಕ್ಷ ರೂಪಾಯಿಗಳನ್ನು ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ. ಈ ಪೈಲಟ್ ಪ್ರಾಜೆಕ್ಟ್‌ಗೆ ಅಗತ್ಯವಿರುವ machines/tools/equipments ಮುಂತಾದವುಗಳನ್ನು ನೇರವಾಗಿ ಬೆಂಗಳೂರಿನ ಬಿಎಂಟಿಸಿ ವರ್ಕ್‌ಶಾಪ್‌ನಿಂದ ಸಂಗ್ರಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಪಾರದರ್ಶಕತೆ ಕಾಯ್ದೆಯಡಿ ಈ ಪೈಲಟ್ ಪ್ರಾಜೆಕ್ಟ್‌ಗೆ ವಿನಾಯಿತಿ ನೀಡಲಾಗಿದೆ.

ಇದರ ಜೊತೆಗೆ ಈ ಪೈಲಟ್ ಪ್ರಾಜೆಕ್ಟ್ ಅನ್ನು ಅನುಷ್ಠಾನಗೊಳಿಸುವ ಬಗ್ಗೆ ಕೆಳಕಂಡ ಷರತ್ತುಗಳನ್ನು ಕಡ್ಡಾಯವಾಗಿ ಪಾಲಿಸುವಂತೆ ಸೂಚಿಸಲಾಗಿದೆ.

1. ಉತ್ತಮ ಗುಣಮಟ್ಟದ machines/tools/equipments ಮುಂತಾದವುಗಳನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ದೃಢಪಡಿಸಿಕೊಳ್ಳುವ ಜವಾಬ್ದಾರಿಯನ್ನು ವ್ಯವಸ್ಥಾಪಕ ನಿರ್ದೇಶಕರು, ಬಿಎಂಟಿಸಿ, ಬೆಂಗಳೂರು ಇವರಿಗೆ ವಹಿಸಿಕೊಡಲಾಗಿದೆ; ಹಾಗೊಮ್ಮೆ ಬಿಎಂಟಿಸಿ ಸಂಸ್ಥೆಯು ಈ ಕಾರ್ಯವನ್ನು ಬೇರೆಯವರ ಮುಖಾಂತರ ಕೈಗೊಳ್ಳುವುದಾದಲ್ಲಿ ಕೆ.ಟಿ.ಪಿ.ಪಿ. ಅಧಿನಿಯಮ ಮತ್ತು ಸದರಿ ಅಧಿನಿಯಮದಡಿ ನಿಗದಿಪಡಿಸಿರುವ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸಬೇಕಾಗಿ ಸೂಚಿಸಲಾಗಿದೆ ;
2. ಸದರಿ ಪೈಲಟ್ ಪ್ರಾಜಕ್ಟ್‌ನಡಿ ತಯಾರಿಸಲಾಗುವ prototype mechanism ಯಂತ್ರವನ್ನು ಸಿದ್ಧಪಡಿಸಿದ ನಂತರ, ಅದನ್ನು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಗಮನಕ್ಕೆ ತಂದು, ನಂತರ ಅದನ್ನು ಪ್ರದರ್ಶಿಸತಕ್ಕದ್ದು ;
3. ಈ ಪೈಲಟ್ ಪ್ರಾಜೆಕ್ಟ್‌ನ್ನು ಸಾರಿಗೆ ಇಲಾಖೆ (ಬಿಎಂಟಿಸಿ ಸಂಸ್ಥೆ, ಬೆಂಗಳೂರು) ಹಾಗೂ ನಗರಾಭಿವೃದ್ಧಿ ಇಲಾಖೆ (ಆಯುಕ್ತರು, ಬಿಬಿಎಂಪಿ, ಬೆಂಗಳೂರು) ರವರ ಮೇಲ್ವಿಚಾರಣೆ ಹಾಗೂ ಆಯಾ ಆಡಳಿತ ಇಲಾಖೆಯ ಮಾರ್ಗದರ್ಶನದಲ್ಲಿ ನಿರ್ವಹಿಸತಕ್ಕದ್ದು. ಇದಕ್ಕಾಗಿ ಸಂಬಂಧಪಟ್ಟ ಸಾರಿಗೆ ಇಲಾಖೆ (ಬಿಎಂಟಿಸಿ ಸಂಸ್ಥೆ, ಬೆಂಗಳೂರು) ಹಾಗೂ ನಗರಾಭಿವೃದ್ಧಿ ಇಲಾಖೆಯು (ಆಯುಕ್ತರು, ಬಿಬಿಎಂಪಿ, ಬೆಂಗಳೂರು) ಇವರುಗಳು ಈ ಪೈಲಟ್ ಪ್ರಾಜೆಕ್ಟ್‌ನ್ನು ಅನುಷ್ಠಾನಗೊಳಿಸುವ ಸಂಬಂಧ ಎಲ್ಲಾ ರೀತಿಯ ಸಹಕಾರ ನೀಡತಕ್ಕದ್ದು ;
4. ಈ ಪೈಲಟ್ ಪ್ರಾಜೆಕ್ಟ್‌ಗಾಗಿ ಮಂಜೂರಾಗಿರುವ ಅನುದಾನವನ್ನು ಸಂಪೂರ್ಣವಾಗಿ ಉಪಯೋಗಿಸಿಕೊಂಡಿರುವ ಬಗ್ಗೆ 'ಬಳಕೆ ಪ್ರಮಾಣ ಪತ್ರ'ವನ್ನು ಬೆಂಗಳೂರಿನ ಬಿಎಂಟಿಸಿ ಸಂಸ್ಥೆಯ, ವ್ಯವಸ್ಥಾಪಕ ನಿರ್ದೇಶಕರು, ಇವರು ಇದನ್ನು ಸಾರಿಗೆ ಇಲಾಖೆಯ ಮುಖಾಂತರ, ಸಿಆಸುಇ (ಆಸು) ಇಲಾಖೆಗೆ ಸಲ್ಲಿಸತಕ್ಕದ್ದು ;
5. ಈ ಪೈಲಟ್ ಪ್ರಾಜೆಕ್ಟ್‌ನ್ನು ಯಶಸ್ವಿಯಾಗಿ ಪ್ರದರ್ಶಿಸಿದ ನಂತರ, ಆ ಬಗ್ಗೆ ಪ್ರತ್ಯೇಕ ವರದಿಯನ್ನು ಸರ್ಕಾರದ ಸಾರಿಗೆ ಇಲಾಖೆ ಹಾಗೂ ನಗರಾಭಿವೃದ್ಧಿ ಇಲಾಖೆಯ ಮುಖಾಂತರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಸು)ಗೆ ಕಳುಹಿಸಿಕೊಡತಕ್ಕದ್ದು. ನಂತರ ಸದರಿ ಪೈಲಟ್ ಪ್ರಾಜೆಕ್ಟ್‌ನ ಪ್ರಸ್ತಾವನೆಯನ್ನು ಸಲ್ಲಿಸಿದ ಅಧಿಕಾರಿಗಳಿಗೆ ಪ್ರಶಸ್ತಿ ನೀಡುವ ಬಗ್ಗೆ ಉನ್ನತಾಧಿಕಾರ ಸಮಿತಿಯ ಆದೇಶ ಪಡೆಯಲಾಗುವುದು ;
6. ಇದರ ಜೊತೆಗೆ ಸರ್ಕಾರದ ಅದೇಶ ಸಂಖ್ಯೆ : ಸಿಆಸುಇ 92 ಇಆಸು 2009, ದಿನಾಂಕ : 08–07–2010 ರಲ್ಲಿ ನಿಗಧಿಪಡಿಸಿರುವ ಎಲ್ಲಾ ಷರತ್ತುಗಳನ್ನು ಸಹ ಕಡ್ಡಾಯವಾಗಿ ಪಾಲಿಸುವಂತೆ ಸಂಬಂಧಪಟ್ಟ ಇಲಾಖೆಗಳಿಗೆ ಈ ಮೂಲಕ ಸೂಚಿಸಲಾಗಿದೆ.
7. ಈ ಪೈಲಟ್ ಪ್ರಾಜೆಕ್ಟ್‌ನ್ನು ಪ್ರದರ್ಶಿಸಿ ಅನುಷ್ಠಾನಗೊಳಿಸಲಾದ ನಂತರ, ಈ ಯೋಜನೆಯನ್ನು ರಾಜ್ಯದಲ್ಲಿ ಉನ್ನತೀಕರಿಸಲು ನಗರಾಭಿವೃದ್ಧಿ ಇಲಾಖೆಯು ಉದ್ದೇಶಿಸಿದಲ್ಲಿ, ಈ ಬಗ್ಗೆ ನಗರಾಭಿವೃದ್ಧಿ ಇಲಾಖೆಯು ಉನ್ನತಾಧಿಕಾರ ಸಮಿತಿಯ ಅನುಮೋದನೆ ಪಡೆದು ನಂತರ, ಸ್ವತಂತ್ರ ಏಜೆನ್ಸಿಯ ಮೂಲಕ ಸದರಿ ಪೈಲಟ್ ಪ್ರಾಜೆಕ್ಟ್‌ನ್ನು ಮೌಲ್ಯಮಾಪನ ಮಾಡಿಸುವುದು. ಈ ಪೈಲಟ್ ಪ್ರಾಜೆಕ್ಟಿನ ಮೌಲ್ಯಮಾಪನ ಕಾರ್ಯಕ್ಕೆ ತಗಲುವ ವೆಚ್ಚವನ್ನು ಆಡಳಿತ ಇಲಾಖೆಯ ವತಿಯಿಂದ ಭರಿಸುವುದು.
8. ಈ ಪೈಲಟ್ ಪ್ರಾಜೆಕ್ಟ್‌ನ್ನು ಸ್ವತಂತ್ರ ಏಜೆನ್ಸಿಯ ಮೂಲಕ ಮೌಲ್ಯಮಾಪನ ಮಾಡಿಸಿದ ನಂತರದಲ್ಲಿ ಹಾಗೂ ಈ ಯೋಜನೆಯನ್ನು ಕಾರ್ಯಗತಗೊಳಿಸಲು ಆಡಳಿತ ಇಲಾಖೆಯು ನಿರ್ಧರಿಸಿದಲ್ಲಿ, ಇಲಾಖೆಯ ಸಂಬಂಧಪಟ್ಟ ಲೆಕ್ಕಶೀರ್ಷಿಕೆಯಡಿ ಯೋಜನಾ ಇಲಾಖೆ ಮತ್ತು ಆರ್ಥಿಕ ಇಲಾಖೆಗಳ ಸಹಮತಿಯೊಂದಿಗೆ ಅನುದಾನ ಒದಗಿಸಿಕೊಂಡು ಸದರಿ ಯೋಜನೆಯನ್ನು ಕಾರ್ಯಗತಗೊಳಿಸತಕ್ಕದ್ದು.

ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 975 ವೆಚ್ಚ – 12/2010, ದಿನಾಂಕ : 26–11–2010ರ ಟಿಪ್ಪಣಿಯಲ್ಲಿ ನೀಡಿರುವ ಸಹಮತಿಯ ಮೇರೆಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಅಬ್ದುಲ್ ರೆಹಮಾನ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ. ಆರ್. 381 ಸಿಆಸುಇ (ಆಸು–ತರಬೇತಿ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಸಣ್ಣ ನೀರಾವರಿ) ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :** **1.** ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 96 ಸಅಸೇ 2010 ದಿನಾಂಕ : 08–02–2010

**2.** ಅನಧಿಕೃತ ಟಿಪ್ಪಣಿ ಸಂಖ್ಯೆ : ಸನೀಇ 108 ಸೇಎಸು 2010, ದಿನಾಂಕ : 10–01–2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ, (ಸಣ್ಣ ನೀರಾವರಿ) ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ : 01–01–2010 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸಣ್ಣ ನೀರಾವರಿ ಅಂತರ್‌ಜಲ ವಿಷಯಗಳಿಗೆ ಸಂಬಂಧಿಸಿದಂತೆ ಹಲವಾರು ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುತ್ತಿರುವುದರಿಂದ ಈ ಹುದ್ದೆಗಳನ್ನು ದಿನಾಂಕ : 01–01–2011 ರಿಂದ ಮತ್ತೆ ಒಂದು ವರ್ಷ ಅವಧಿಗೆ ಮುಂದುವರಿಸುವಂತೆ ಕೋರಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 48 ಸಅಸೇ 2011, ಬೆಂಗಳೂರು, ದಿನಾಂಕ : 31ನೇ ಜನವರಿ 2011**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿನ ಸರ್ಕಾರದ ಕಾರ್ಯದರ್ಶಿ, (ಸಣ್ಣ ನೀರಾವರಿ) ಹಾಗೂ ಈ ಕೆಳಕಂಡ ಪೂರಕ ಹುದ್ದೆಗಳನ್ನು ದಿನಾಂಕ : 01–01–2011 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಶೀಘ್ರಲಿಪಿಗಾರರು | 2 ಹುದ್ದೆಗಳು |
| 2. | ಭಾಷಾಂತರಕಾರರು | 01 |
| 3. | ಕಿರಿಯ ಸಹಾಯಕರು | 01 |
| 4. | ವಾಹನ ಚಾಲಕರು | 01 |
| 5. | ದಲಾಯತ್ | 2 ಹುದ್ದೆಗಳು |
| | ಒಟ್ಟು ಹುದ್ದೆಗಳು | 07 |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10–07–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಅನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ. ಆರ್. 382 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

(ಸೇವೆಗಳು–3).

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಜೂಲೀರಪ್ಪ, ಶಿರಸ್ತೇದಾರ (ನಿ) ತಹಶೀಲ್ದಾರರ ಕಛೇರಿ, ಸಿದ್ಧಾಪುರ ಇವರಿಗೆ ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ :** 1. ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಅ.ಸ.ಪ.ಸಂ. ಕಾಂಪ್ಟ್/ಉಪಲೋಕ್/ಬಿಜಿಎಂ 258/2005 Sr.App ದಿನಾಂಕ : 09–08–06.

2. ಸಮಸಂಖ್ಯೆಯ ಸರ್ಕಾರದ ಆದೇಶ ದಿನಾಂಕ : 28–09–2006

3. ಗೌರವಾನ್ವಿತ ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ: ಎಲ್‌ಒಕೆ/ಎಆರ್‌ಇ–3/9 ಇಎನ್‌ಕ್ಯೂ–16/2007–08, ದಿನಾಂಕ : 03–02–2009.

4. ಸಮಸಂಖ್ಯೆಯ ಅಂತಿಮ ಕಾರಣ ಕೇಳುವ ನೋಟೀಸು ದಿನಾಂಕ : 15–09–2009.

5. ನೌಕರರ ಮನವಿ ದಿನಾಂಕ : 09–12–2010.

**ಪ್ರಸ್ತಾವನೆ :**

ಶ್ರೀ ಜೂಲೀರಪ್ಪ, ಶಿರಸ್ತೇದಾರ (ನಿ) ಇವರು ಈ ಹಿಂದೆ ಶಿರಸ್ತೇದಾರ್‌ರಾಗಿ ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ತಾಲ್ಲೂಕು ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ : 13–08–2003 ರಂದು ಸಿದ್ದಾಪುರ ತಾಲ್ಲೂಕು ಬಾಳೆಗದ್ದೆ ಸಂಪಗೌಡ, ಗ್ರಾಮದ ನಿವಾಸಿ

ಶ್ರೀ ಗಂಗಾಧರ ರಾಮನಾಯಕ್ ಅವರ ಸಹೋದರರಾದ ಶ್ರೀ ಅಣ್ಣಪ್ಪ ರಾಮನಾಯಕ ಇವರ ವಾರಸು ದಾಖಲಿಸುವ ವಿಚಾರವಾಗಿ ರೂ. 1000–00 ಗಳ ಅಕ್ರಮ ಸಂಭಾವನೆಗೆ ಒತ್ತಾಯಿಸಿ ಪಡೆದ ಬಗ್ಗೆ ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಕಲಂ 78(2)ರನ್ವಯ ಪೋಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಕಾರವಾರ ಇವರು ಸ್ವವಿವೇಚನೆಯಿಂದ Suomoto ಪ್ರಕರಣವನ್ನು ದಾಖಲು ಮಾಡಿಕೊಂಡು ಸದರಿಯವರ ವಿರುದ್ಧ ತನಿಖೆ ನಡೆಸಿ, ನೌಕರರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಕೆಸಿಎಸ್ (ಸಿಸಿಎ) ನಿಯಮ 14–ಎ ರನ್ವಯ ಲೋಕಾಯುಕ್ತಕ್ಕೆ ವಹಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಅನುಸಾರ ಗೌರವಾನ್ವಿತ ಉಪಲೋಕಾಯುಕ್ತರು ಸರ್ಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಸದರಿ ವರದಿಯನ್ನು ಪರಿಶೀಲಿಸಿ ಶ್ರೀ ಜೂಲೀರಪ್ಪ, ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ನೌಕರರು ನಿವೃತ್ತಿಯಾಗಿದ್ದರಿಂದ ಕೆ.ಸಿ.ಎಸ್. ನಿಯಮ 1957ರ ನಿಯಮ 214(2)(ಬಿ) ಪ್ರಕಾರ ಹಾಗೂ ಕೆ.ಸಿ.ಎಸ್. (ಸಿಸಿಎ) ನಿಯಮಗಳು 1957ರ ನಿಯಮ 14–ಎ ರಂತೆ ಇಲಾಖಾ ವಿಚಾರಣೆಯನ್ನು ಜರುಗಿಸಿ ವರದಿ ನೀಡಲು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಅನುಸಾರ ಪ್ರಕರಣವನ್ನು ಗೌರವಾನ್ವಿತ ಉಪಲೋಕಾಯುಕ್ತರು, ಬೆಂಗಳೂರು ಇವರಿಗೆ ವಹಿಸಿ ಆದೇಶಿಸಲಾಗಿತ್ತು, ಅದರಂತೆ ನೌಕರರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ : (3)ರ ಅನುಸಾರ ಸರ್ಕಾರಕ್ಕೆ ವರದಿ ನೀಡಿರುವ ಗೌರವಾನ್ವಿತ ಉಪಲೋಕಾಯುಕ್ತರು ನೌಕರರ ವಿರುದ್ಧ ನಡೆಸಿದ ಇಲಾಖಾ ವಿಚಾರಣೆಯಲ್ಲಿ ಇವರ ಆರೋಪವು ಸಾಬೀತಾದ ಹಿನ್ನೆಲೆಯಲ್ಲಿ ಪ್ರಸ್ತುತ ಅವರು ಸೇವೆಯಿಂದ ನಿವೃತ್ತಿ ಹೊಂದಿರುವುದರಿಂದ ಅವರ ನಿವೃತ್ತಿ ವೇತನದಲ್ಲಿ ಶೇ. 25 ರಷ್ಟನ್ನು ಖಾಯಂ ಆಗಿ ತಡೆಹಿಡಿಯುವ ದಂಡನೆಯನ್ನು ವಿಧಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಅದರಂತೆ ಗೌರವಾನ್ವಿತ ಉಪಲೋಕಾಯುಕ್ತರ ಶಿಫಾರಸ್ಸಿನ ಅನುಸಾರ ದಂಡನೆಯನ್ನು ವಿಧಿಸುವ ಕುರಿತು ಮೇಲೆ ಓದಲಾದ ಕ್ರಮ ಸಂಖ್ಯೆ (4) ಅನುಸಾರ ನೌಕರರಿಗೆ 2ನೇ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಅದಕ್ಕೆ ಓದಲಾದ ಕ್ರಮ ಸಂಖ್ಯೆ (5)ರ ಅನುಸಾರ ಉತ್ತರ ಸಲ್ಲಿಸಿದ ನೌಕರರು ತಮ್ಮ ವಿರುದ್ಧ ದಾಖಲಾಗಿರುವ ಕ್ರಿಮಿನಲ್ ಮೊಕದ್ದಮೆಯಲ್ಲಿ ನ್ಯಾಯಾಲಯದ ಆದೇಶ ಇಷ್ಟರಲ್ಲೇ ಹೊರಬೀಳುವ ಸಂಭವವಿದ್ದು ಅಲ್ಲಿಯವರೆಗೆ ತಮಗೆ ಯಾವುದೇ ದಂಡನೆ ವಿಧಿಸಬಾರದೆಂದು ಕೋರಿರುತ್ತಾರೆ.

ಸರ್ಕಾರದ ಸುತ್ತೋಲೆ ಸಂಖ್ಯೆ : ಸಿಆಸುಇ 9 ಸೇಇವಿ 95, ದಿನಾಂಕ : 26–06–1996ರನ್ವಯ ಕ್ರಿಮಿನಲ್ ನ್ಯಾಯಾಲಯದಲ್ಲಿ ದಂಡನೆಗೆ ಒಳಗಾದ ಸರ್ಕಾರಿ ನೌಕರನು ಆ ನ್ಯಾಯಾಲಯದಲ್ಲಿ ತನಗೆ ವಿಧಿಸಿದ ದಂಡನೆಯ ವಿರುದ್ಧ ತಡೆಯಾಜ್ಞೆ ಪಡೆದುಕೊಂಡಾಗಲಿ ಅಥವಾ ವೈಯಕ್ತಿಕ ಜಾಮೀನಿನ ಮೇಲೆ ಬಿಡುಗಡೆ ಆದೇಶ ಪಡೆದುಕೊಂಡಾಗಲಿ ಎಂಬ ಕಾರಣಕ್ಕಾಗಿ ಕೆ.ಸಿ.ಎಸ್. (ಸಿಸಿ ಮತ್ತು ಎ) ನಿಯಮ 1957ರ ನಿಯಮ 14(1)ರ ಅನುಸಾರ ಕ್ರಮ ಜರುಗಿಸಬೇಕಾದನ್ನು ತಡೆಹಿಡಿಯಬೇಕಾದ ಅಗತ್ಯವಿಲ್ಲವೆಂದು ತಿಳಿಸಲಾಗಿದೆ. ಒಂದು ವೇಳೆ ಖುಲಾಸೆಯಾದಲ್ಲಿ ಸೇವೆಯಲ್ಲಿ ಮುಂದುವರೆದಿದ್ದರೆ ಅವರು ಎಲ್ಲಾ ಸೌಲಭ್ಯಗಳಿಗೆ ಹಕ್ಕುಳ್ಳವನಾಗಿರುತ್ತಾನೆಂದು ತಿಳಿಸಲಾಗಿದೆ. ಇನ್ನು ಹೇಳಬೇಕೆಂದರೆ ಕ್ರಿಮಿನಲ್ ಪ್ರಕರಣದಲ್ಲಿ ಖುಲಾಸೆಯಾದರೂ ಸಹ ಇಲಾಖಾ ವಿಚಾರಣೆ ನಡೆಸಿ ಆಪಾದನೆ ಸಾಬೀತಾದಂತಹ ಪ್ರಕರಣದಲ್ಲಿ ದಂಡನೆಯನ್ನು ವಿಧಿಸಬಹುದಾಗಿದೆ. ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆಯಲ್ಲಿ ಆಪಾದನೆಗಳು ಸಾಬೀತಾಗಿರುವುದರಿಂದ ನ್ಯಾಯಾಲಯದ ಕ್ರಿಮಿನಲ್ ಪ್ರಕರಣದಲ್ಲಿ ಬರುವ ತೀರ್ಪು ಯಾವುದೇ ಪರಿಣಾಮ ಬೀರುವುದಿಲ್ಲ. ಆದ್ದರಿಂದ ನೌಕರರಿಗೆ ಗೌರವಾನ್ವಿತ ಉಪ ಲೋಕಾಯುಕ್ತರು ಶಿಫಾರಸ್ಸು ಮಾಡಿರುವ ದಂಡನೆಯನ್ನು ವಿಧಿಸಲು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಕಂಇ 453 ಬಿಎಂಎಂ 2006, ಬೆಂಗಳೂರು, ದಿನಾಂಕ : 25ನೇ ಜನವರಿ 2011**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಆಪಾದಿತ ನೌಕರನು ಮೇಲಿನ ಆರೋಪಗಳು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಮಾನ್ಯ ಉಪಲೋಕಾಯುಕ್ತರ ಶಿಫಾರಸ್ಸನ್ನು ಸರ್ಕಾರವು ಒಪ್ಪಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ (ಸಿಸಿಎ) ನಿಯಮಾವಳಿಗಳು–11ಎ ರನ್ವಯ ಹಾಗೂ ಕೆ.ಸಿ.ಎಸ್. ನಿಯಮ 214(1)(ಎ) ರಂತೆ ಶ್ರೀ ಎಸ್. ಜೂಲೀರಪ್ಪ, ಹಿಂದಿನ ಶಿರಸ್ತೇದಾರರು, ತಾಲ್ಲೂಕು ಕಛೇರಿ, ಸಿದ್ದಾಪುರ, ಉತ್ತರ ಕನ್ನಡ ಜಿಲ್ಲೆ, (ಪ್ರಸ್ತುತ ನಿವೃತ್ತ) ಇವರಿಗೆ ನಿವೃತ್ತಿ ವೇತನದಲ್ಲಿ ಶೇ. 25 ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ. ಆರ್. 383 ಕಂದಾಯ ಇಲಾಖೆ (ಸೇವೆಗಳು–ಎ)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಅಶ್ವತ್ಥನಾರಾಯಣ ರಾವ್, ತಹಶೀಲ್ದಾರ್, ಪ್ರಸ್ತುತ ನಿಯೋಜನೆ ಮೇರೆಗೆ ಶಾಖಾಧಿಕಾರಿ, ರಾಜ್ಯ ಚುನಾವಣಾ ಆಯೋಗ ಇವರ ಸ್ವಯಂ ನಿವೃತ್ತಿಯನ್ನು ಹಿಂದಕ್ಕೆ ಪಡೆಯುವ ಕುರಿತು.

**ಓದಲಾಗಿದೆ :**
1. ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪತ್ರ ಸಂಖ್ಯೆ : ಸಿಬ್ಬಂದಿ (4)/ಸಿಆರ್/17/08–09, ದಿನಾಂಕ : 13–08–2009.
2. ಅಧೀನ ಕಾರ್ಯದರ್ಶಿ, ರಾಜ್ಯ ಚುನಾವಣಾ ಆಯೋಗ ಇವರ ಪತ್ರ ಸಂಖ್ಯೆ : ರಾಚುಆ/28/ಸಿಬ್ಬಂದಿ/2009, ದಿನಾಂಕ : 30–11–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1)ರಲ್ಲಿ ಶ್ರೀ ಅಶ್ವತ್ಥನಾರಾಯಣ ರಾವ್, ತಹಶೀಲ್ದಾರ್, ಪ್ರಸ್ತುತ ನಿಯೋಜನೆ ಮೇರೆಗೆ ಶಾಖಾಧಿಕಾರಿ, ರಾಜ್ಯ ಚುನಾವಣಾ ಅಯೋಗ ಇವರು ಈ ಹಿಂದೆ ತಹಶೀಲ್ದಾರ್, ಚಿಕ್ಕನಾಯಕನಹಳ್ಳಿ ತಾಲ್ಲೂಕು ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ತಮ್ಮ ಆರೋಗ್ಯ ಕ್ಷೀಣಿಸುತ್ತಿರುವುದರಿಂದ ಹಾಗೂ ಜ್ಞಾಪಕ ಶಕ್ತಿ ಕುಂದುತ್ತಿರುವುದರಿಂದ ದಿನಾಂಕ : 29–09–2007 ರಿಂದ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡುವಂತೆ ಕೋರಿದ್ದರೆಂದು ತಿಳಿಸುತ್ತಾ, ಸದರಿಯವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಹಾಗೂ ಸರ್ಕಾರಕ್ಕೆ ಬರಬೇಕಾದ ಯಾವುದೇ

ಬಾಕಿ ಇರುವುದಿಲ್ಲವೆಂದು ದೃಢೀಕರಿಸಿ ಕರ್ನಾಟಕ ನಾಗರೀಕ ಸೇವಾ ನಿಯಮ 285(1)(ಎ) ರಡಿಯಲ್ಲಿ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡುವ ಕುರಿತು ಅಗತ್ಯ ಕ್ರಮ ಕೈಗೊಳ್ಳುವಂತೆ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ರವರು ಕೋರಿದ್ದರು.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸುತ್ತಿರುವಾಗ ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಅಧೀನ ಕಾರ್ಯದರ್ಶಿಗಳು, ರಾಜ್ಯ ಚುನಾವಣಾ ಆಯೋಗ ಇವರು ಶ್ರೀ ಡಿ. ಅಶ್ವತ್ಥನಾರಾಯಣರಾವ್ ರವರು ತಮಗೆ ಸ್ವಯಂ ನಿವೃತ್ತಿ ಹೊಂದಲು ನೀಡಿದ್ದ ಅರ್ಜಿಯನ್ನು ಹಿಂದಕ್ಕೆ ಪಡೆಯುವ ಕುರಿತು ಮನವಿಯನ್ನು ಸಲ್ಲಿಸಿರುವುದಾಗಿ ತಿಳಿಸುತ್ತಾ, ಸದರಿಯವರು ರಾಜ್ಯ ಚುನಾವಣಾ ಆಯೋಗದಲ್ಲಿ ಸೆಪ್ಟೆಂಬರ್ 2009 ರಿಂದ ಶಾಖಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದು, ಬೆಂಗಳೂರಿನಲ್ಲಿ ಸಿಕ್ಕ ಉತ್ತಮ ಆರೋಗ್ಯ ಸೌಲಭ್ಯದಿಂದಾಗಿ ಆರೋಗ್ಯ ಸುಧಾರಿಸಿರುವುದರಿಂದ ಹಾಗೂ ಆಯೋಗದಲ್ಲಿ ಸ್ಥಳೀಯ ಸಂಸ್ಥೆಗಳ ಚುನಾವಣೆಗೆ ಸಂಬಂಧಿಸಿದಂತೆ ಅವರ ಅನುಭವಿಕ ಸೇವೆಯು ತೀರಾ ಅಗತ್ಯವಿದೆ ಎಂದು ತಿಳಿಸುತ್ತಾ ರಾಜ್ಯ ಚುನಾವಣಾ ಆಯೋಗದಲ್ಲಿಯೇ ಮುಂದುವರೆಸಬೇಕೆಂದು ಕೋರಿರುತ್ತಾರೆ.

ಶ್ರೀ ಡಿ. ಅಶ್ವತ್ಥನಾರಾಯಣ ರಾವ್, ತಹಶೀಲ್ದಾರ್ ಇವರು ಸ್ವಯಂ ನಿವೃತ್ತಿಗೆ ಅನುಮತಿ ನೀಡುವ ಮೊದಲೇ ಸ್ವಯಂ ನಿವೃತ್ತಿ ಅರ್ಜಿಯನ್ನು ಹಿಂದಕ್ಕೆ ಪಡೆಯಲು ಕೋರಿಕೆ ಸಲ್ಲಿಸಿರುವ ಹಿನ್ನೆಲೆಯಲ್ಲಿ ಶ್ರೀ ಡಿ. ಅಶ್ವತ್ಥನಾರಾಯಣರಾವ್, ಶಾಖಾಧಿಕಾರಿ, ರಾಜ್ಯ ಚುನಾವಣಾ ಆಯೋಗ ಇವರ ಸ್ವಯಂ ನಿವೃತ್ತಿ ಕೋರಿಕೆಯ ಮನವಿಯನ್ನು ಹಿಂದಕ್ಕೆ ಪಡೆಯುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 595 ಎಎಸ್‌ಡಿ 2009, ಬೆಂಗಳೂರು, ದಿನಾಂಕ : 25ನೇ ಜನವರಿ 2011**

ಶ್ರೀ ಡಿ. ಅಶ್ವತ್ಥನಾರಾಯಣ ರಾವ್, ತಹಶೀಲ್ದಾರ್, ಪ್ರಸ್ತುತ ಶಾಖಾಧಿಕಾರಿ, ರಾಜ್ಯ ಚುನಾವಣಾ ಆಯೋಗರವರು ದಿನಾಂಕ : 30-11-2010ರ ಮನವಿಯಲ್ಲಿ ಸ್ವಇಚ್ಛಾ ನಿವೃತ್ತಿ ಹೊಂದಲು ಕೋರಿರುವ ಮನವಿಯನ್ನು ಹಿಂಪಡೆಯಲು ಸಲ್ಲಿಸಿರುವ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಡಿ. ಅಶ್ವತ್ಥನಾರಾಯಣರಾವ್‌ರವರ ಸ್ವಇಚ್ಛಾ ಮನವಿಯನ್ನು ಹಿಂಪಡೆಯಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 285 (2) (X) ರನ್ವಯ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ. ಆರ್. 384 ಕಂದಾಯ ಇಲಾಖೆ, (ಸೇವೆಗಳು-3)

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಗುಲ್ಬರ್ಗಾ ಜಿಲ್ಲೆ ಮತ್ತು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಯೋಇ 309 ಪಿಟಿಪಿ 94, ದಿನಾಂಕ : 07-08-1995.

2. ಸನ್ಮಾನ್ಯ ಮುಖ್ಯಮಂತ್ರಿಯವರ ಟಿಪ್ಪಣಿ ಪತ್ರ ಸಂಖ್ಯೆ : ಮುಮಂ/170/ಆ.ಕಾ./2010 ದಿನಾಂಕ :19-11-2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ : 07-08-1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮೇಲೆ ಓದಲಾದ (2)ರ ಸನ್ಮಾನ್ಯ ಮುಖ್ಯಮಂತ್ರಿಯವರ ಟಿಪ್ಪಣಿ ಪತ್ರದಲ್ಲಿ ಆದೇಶಿಸಿರುವಂತೆ ಗುಲ್ಬರ್ಗಾ ಜಿಲ್ಲೆಯ ಆಳಂದ ತಾಲ್ಲೂಕಿನ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 70 ಯೋವಿವಿ 2009 (ಭಾ) ಬೆಂಗಳೂರು, ದಿನಾಂಕ: 14-02-2011.**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಕೆಳಕಂಡ ಸದಸ್ಯರುಗಳನ್ನು / ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂಖ್ಯೆ | ಜಿಲ್ಲೆ / ತಾಲ್ಲೂಕು | ಅಭ್ಯರ್ಥಿಗಳ ಹೆಸರು ಶ್ರೀಯುತರು/ಶ್ರೀಮತಿ | ವರ್ಗ |
|---|---|---|---|
| 1. | ಗುಲ್ಬರ್ಗಾ ಜಿಲ್ಲೆ ಆಳಂದ ತಾಲ್ಲೂಕು | 1. ವಿರುಪಾಕ್ಷಪ್ಪ ಬಿನ್ ಚನ್ನಮಲ್ಲಪ್ಪ ವಾಗ್ದಾರೆ ಮು : ರುದ್ರವಾಡಿ, ಆಳಂದ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ<br>2. ಶ್ರೀ ಶೈಲ್ ಬಿನ್ ಗುರುಪಾದಪ್ಪಾ ಪಾಟೀಲ್ ಮು : ಕಡಗಂಚಿ, ಆಳಂದ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ<br>3. ಬಾಸು ಬಿನ್ ಭೀಮಶಾ ಚವ್ಹಾಣ ಮು : ಯಳಸಂಗಿ ತಾಂಡಾ, ಆಳಂದ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ<br>4. ವಿಠಲ್ ಮಾದವರಾವ್ ಸಿಂಧೆ, ಮು : ತಡೂಳ, ಆಳಂದ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ<br>5. ಸಂಪತ್‌ಬಾಯಿ ಕೋಂ ಆನಂದರಾಯ್ ಬೀರಾದಾರ್ ಮು : ಜಮಗ ಆರ್. ಆಳಂದ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ | ಸಾಮಾನ್ಯ<br>ಸಾಮಾನ್ಯ<br>ಎಸ್.ಸಿ.<br>ಹಿಂ.ವರ್ಗ<br>ಮಹಿಳೆ<br>ಅ.ಸಂ. |

| | | | |
|---|---|---|---|
| | | 6. ಮೊಹಮದ್ ರಫಿ ಬಿನ್ ಅಹಮದ್ ಸಾಬ್ ಮುಜಾವ್ ಮು : ರುದ್ರವಾಡಿ, ಆಳಂದ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 419

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ 1 & 2
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು
ಸಾಂಖ್ಯಿಕ ಇಲಾಖೆ

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಬೀದರ್ ಜಿಲ್ಲೆ ಮತ್ತು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಯೋಇ 309 ಪಿಟಿಪಿ 94, ದಿನಾಂಕ : 07-08-1995.
2. ಭಾರತೀಯ ಜನತಾ ಪಾರ್ಟಿಯ ರಾಜ್ಯ ಉಪಾಧ್ಯಕ್ಷರ ಪತ್ರ ಸಂ : ಭಾಜಪ/ರಾಕಾ/ನಾನಿ/618, 570, 581, 589 ದಿನಾಂಕ : 09/18-11-2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ : 07-08-1995 ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಬೀದರ್ ಜಿಲ್ಲೆ ಮತ್ತು ತಾಲ್ಲೂಕಿನ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ, ದಿನಾಂಕ : 04-02-2009 ರಂದು ನಾಮನಿರ್ದೇಶನ ಮಾಡಲಾಗಿದ್ದ ಸದಸ್ಯರ ಸದಸ್ಯತ್ವವನ್ನು ರದ್ದುಪಡಿಸಿ ಈ ಕೆಳಕಂಡ ಜಿಲ್ಲೆ ಮತ್ತು ತಾಲ್ಲೂಕಿಗೆ ಸದಸ್ಯರನ್ನು ಹೊಸದಾಗಿ ನಾಮನಿರ್ದೇಶನ ಮಾಡಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 151 ಯೋವಿವಿ 2010 ಬೆಂಗಳೂರು, ದಿನಾಂಕ: 14-02-2011**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಅನುಬಂಧದಲ್ಲಿ ನಮೂದಿಸಿರುವ ಸದಸ್ಯರನ್ನು ಜಿಲ್ಲಾ ಮಟ್ಟದ ಮತ್ತು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ 1 & 2
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು
ಸಾಂಖ್ಯಿಕ ಇಲಾಖೆ

## ಅನುಬಂಧ

| ಕ್ರಮ ಸಂಖ್ಯೆ | ಜಿಲ್ಲೆ / ತಾಲ್ಲೂಕು | ಹೆಸರು | ವರ್ಗ |
|---|---|---|---|
| 1. | ಬೀದರ್ | 1. ಶ್ರೀಮತಿ ಅನುರಾಧ ಸುಭಾಶ ಗಣೇಶ ಘಾಟಬೋರಳ, ಹುಮನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ | ಮಹಿಳೆ |
| | | 2. ಶ್ರೀ ಪೀರಪ್ಪ ಮಾರುತಿರಾವ ಎರಸಿಳ್ಳಿ ಬೀದರ್ ತಾಲ್ಲೂಕು ಮತ್ತು ಜಿಲ್ಲೆ | ಪರಿಶಿಷ್ಟ ಪಂಗಡ |
| | | 3. ಶ್ರೀ ಜಗನ್ನಾಥ ರೆಡ್ಡಿ, ಕಿಟ್ಟಾ ಬಸವಕಲ್ಯಾಣ | ಹಿಂದುಳಿದ ವರ್ಗ |
| | | 4. ಶ್ರೀ ಮ.ಗಚಾರ ಭಾಂಬ್ರಾ ಭಾಲ್ಕಿ | ಅಲ್ಪಸಂಖ್ಯಾತ |
| | | 5. ಶ್ರೀ ಪ್ರಕಾಶ ಟೊಣ್ಣೆ ಕಮಲನಗರ, ಔರಾದ್ ತಾಲ್ಲೂಕು, ಬೀದರ್ ಜಿಲ್ಲೆ | ಸಾಮಾನ್ಯ |
| 2. | ಬೀದರ್ ಜಿಲ್ಲೆ ಬಸವಕಲ್ಯಾಣ ತಾಲ್ಲೂಕು | 1. ಶ್ರೀ ಲಕ್ಷ್ಮಣ ಬಿನ್ ಹಣಮಂತಪ್ಪಾ ಗುಂಜೋಟೆ ಮಂಠಾಳ, ಬಸವಕಲ್ಯಾಣ ತಾ: | ಎಸ್.ಟಿ. |
| | | 2. ಶ್ರೀ ಶಿವಪುತ್ರ ಬಿನ್ ಶರಣಪ್ಪಾ ಗೌಡ ಬುಧವಾರಪೇಟೆ, ಬಸವಕಲ್ಯಾಣ ತಾ: | ಸಾಮಾನ್ಯ |
| | | 3. ಶ್ರೀ ಪ್ರಭಾಕರ ಬಿನ್ ಬಸವಣಪ್ಪಾ ನಾಗರಾಳೆ ಯರಬಾಗ, ಬಸವಕಲ್ಯಾಣ ತಾ: | ಸಾಮಾನ್ಯ |
| | | 4. ಶ್ರೀಮತಿ ಸುಧಾ ಕೋಂ. ಮಾಣಿಕಪ್ಪಾ ಗಸನೆ ರಾಜೇಶ್ವರ, ಬಸವಕಲ್ಯಾಣ ತಾ: | |
| | | 5. ಶ್ರೀ ಸೈಯದ್ ಜಬ್ಬಾರ ಬಿನ್ ಸೈಯದ್ ಉಸ್ಮಾನ ಸೌದಾಗರ, ಹುಲಸೂರ, ಬಸವಕಲ್ಯಾಣ ತಾ: | ಮಹಿಳೆ |
| | | 6. ಶ್ರೀ ಚಂದ್ರಶೇಖರ ಬಿನ್ ವೀರಶೆಟ್ಟೆಪ್ಪಾ ಪಾಟೀಲ ಹಾಲಹಳ್ಳಿ, ಬಸವಕಲ್ಯಾಣ ತಾ: | ಅ.ಸಂ ಹಿಂ.ವ |

| | | | |
|---|---|---|---|
| 3. | ಬೀದರ್ ಜಿಲ್ಲೆ ಹುಮನಾಬಾದ್ ತಾಲ್ಲೂಕು | 1. ಶ್ರೀ ಖಾಜಾಮಿಯ್ಯಾ ಬಿನ್ ಮೋದಿನಸಾಬ ಮು: ಅಂಚೆ, ಮಾಡಗೋಳ, ಹುಮನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ.<br>2. ಶ್ರೀ ಕರಬಸಪ್ಪ ಬಿನ್ ಷಣ್ಮುಖಪ್ಪಾ ಬಿರಾದರ ಮು: ಮಾಡಗೋಳ, ಅಂಚೆ, ಪಂಡರಗೇರಾ, ಹುಮನಾಬಾದ್ ತಾಲ್ಲೂಕು<br>3. ಶ್ರೀ ಸುಭಾಷ ಬಿನ್ ಭೀಮರಾವ ಗಣೇಶ ಮು: ಅಂಚೆ, ಘಾಟಬೋರಾಳ, ಹುಮನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ<br>4. ಶ್ರೀ ಝುರೆಪ್ಪಾ ಬಿನ್ ತುಕ್ಕಪ್ಪಾ ಮು: ಅಂಚೆ, ಹಂದಿಕೇರಾ, ಹುಮನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ.<br>5. ಶ್ರೀ ರಾಜಕುಮಾರ ಬಿನ್ ವೀರಭದ್ರಪ್ಪಾ ಮಳಗಿ ಮು: ಅಂಚೆ, ಬೇಮಳಖೇಡಾ, ಹುಮನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ | ಅ.ಸಂ. ಸಾಮಾನ್ಯ<br><br>ಬಿ.ಸಿ.ಎಂ.<br>ಎಸ್.ಟಿ.<br>ಸಾಮಾನ್ಯ |
| 4. | ಬೀದರ್ ಜಿಲ್ಲೆ ಭಾಲ್ಕಿ ತಾಲ್ಲೂಕು | 1. ಶ್ರೀ ಉಮಾಕಾಂತ ನಾಗಪ್ಪಾ ಪ್ರಭಾ ಮು: ಹಲಬುರ್ಗಾ, ಬೀದರ್ ಜಿಲ್ಲೆ.<br>2. ಶ್ರೀ ಗೋವಿಂದ್ ಭಾರತಿ ಲಾಲ ಭಾರತಿ ಮು: ಭಾಟಸಾಗ್ವಿ, ಬೀದರ್ ಜಿಲ್ಲೆ<br>3. ಶ್ರೀ ಅಶೋಕ ಮೋರೆ ಮು: ಮೆಹಕರ್, ಬೀದರ್ ಜಿಲ್ಲೆ<br>4. ಶ್ರೀ ದಾವೂದ ಬಿನ್ ಹಮೀದ ಪಟೇಲ್ ಮು: ಸಾಯೆಗಾಂವ, ಬೀದರ್ ಜಿಲ್ಲೆ.<br>5. ಶ್ರೀಮತಿ ಜೈಶ್ರೀ ವಿಶ್ವನಾಥ ಕರಕರೆ ಮು: ಭಾಲ್ಕಿ, ಬೀದರ್ ಜಿಲ್ಲೆ<br>6. ಶ್ರೀಮತಿ ಸುಧಾ ಎಸ್. ಬಿರಾದಾರ ಮು: ಭಾಲ್ಕಿ, ಬೀದರ್ ಜಿಲ್ಲೆ | ಸಾಮಾನ್ಯ.<br>ಸಾಮಾನ್ಯ<br>ಹಿಂ.ವರ್ಗ<br>ಅ.ಸಂ.<br><br>ಪ.ಜಾ. ಮಹಿಳೆ |

**ಬಿ. ಚಿಕ್ಕರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ 1 & 2
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು
ಸಾಂಖ್ಯಿಕ ಇಲಾಖೆ

ಪಿ.ಆರ್. 420

## ಕಂದಾಯ ಸಚಿವಾಲಯ

**ವಿಷಯ** : ಶ್ರೀಮತಿ ಕೆ. ಹೆಚ್. ಭಾಗ್ಯವತಮ್ಮ, ತಹಶೀಲ್ದಾರ್ ಗ್ರೇಡ್–2 ಇವರಿಗೆ ತಹಶೀಲ್ದಾರ್ ಗ್ರೇಡ್–1 ಹುದ್ದೆಗೆ ಪೂರ್ವಾನ್ವಯವಾಗಿ ಬಡ್ತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಶ್ರೀಮತಿ ಕೆ. ಹೆಚ್. ಭಾಗ್ಯವತಮ್ಮ, ತಹಶೀಲ್ದಾರ್, ಕಂದಾಯ ಅಧಿಕಾರಿ, ಬಿ.ಎಂ.ಟಿ.ಎಫ್, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ: 2–8–2010ರ ಮನವಿ.

**2)** ದಿನಾಂಕ: 29–10–2007ರಂದು ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಇಲಾಖಾ ಮುಂಬಡ್ತಿ ಸಮಿತಿ ಸಭೆಯಲ್ಲಿನ ನಡವಳಿ

**3)** ಸರ್ಕಾರದ ಪತ್ರ ಸಂಖ್ಯೆ: ಕಂಇ 508 ಎಎಸ್‌ಡಿ 2010 ದಿನಾಂಕ: 20–10–2010.

**4)** ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 161 ಸಿಎನ್‌ಎಸ್ 2010 ದಿನಾಂಕ: 8–12–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರಂತೆ, ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ತಹಶೀಲ್ದಾರ್, ಕಂದಾಯ ಅಧಿಕಾರಿ, ಬಿ.ಎಂ.ಟಿ.ಎಫ್, ಬೆಂಗಳೂರು ರವರು ದಿನಾಂಕ: 2–8–2010 ರಂದು ಸರ್ಕಾರಕ್ಕೆ ಮನವಿ ಸಲ್ಲಿಸಿ, ಜ್ಯೇಷ್ಠತೆಯಲ್ಲಿ ತಮಗಿಂತ ಕಿರಿಯರಾದ ತಹಶೀಲ್ದಾರ ಗ್ರೇಡ್–2 ರವರಿಗೆ ತಹಶೀಲ್ದಾರ್ ಗ್ರೇಡ್–1 ಹುದ್ದೆಗೆ ಬಡ್ತಿ ನೀಡಿದ್ದು, ಸರ್ಕಾರದ ಅ.ಜ್ಞಾ ಸಂಖ್ಯೆ: ಡಿಪಿಎಆರ್ 5 ಎಸ್‌ಆರ್‌ಪಿ 84 ದಿನಾಂಕ: 9–10–1985 ಹಾಗೂ ಡಿಪಿಎಆರ್ 22 ಎಸ್‌ಆರ್‌ಆರ್ 93 ದಿನಾಂಕ: 14–7–1993 ರನ್ವಯ ತಮ್ಮ ಬಡ್ತಿಯನ್ನು ಮೊಹರು ಲಕೋಟೆ ಪ್ರಕ್ರಿಯೆಯಲ್ಲಿ ಒಳಪಡಿಸಲಾಗಿದ್ದು, ತಮ್ಮ ವಿರುದ್ಧ ಬಾಕಿ ಇದ್ದ 4 ಇಲಾಖಾ ವಿಚಾರಣೆಗಳಿಗೆ ಸಂಬಂಧಿಸಿದಂತೆ, ಕಂದಾಯ ಇಲಾಖೆಯಿಂದ ತಮ್ಮನ್ನು ಆರೋಪದಿಂದ ದೋಷಮುಕ್ತಗೊಳಿಸಿ ಆದೇಶ ಮಾಡಲಾಗಿರುತ್ತದೆ. ತಮ್ಮ ವಿರುದ್ಧದ ಇಲಾಖಾ ವಿಚಾರಣೆಗಳಲ್ಲಿ ಆರೋಪದಿಂದ ದೋಷಮುಕ್ತಗೊಳಿಸಿ ಆದೇಶ ಹೊರಡಿಸಿರುವುದರಿಂದ, ತಮ್ಮ ಪ್ರಕರಣವನ್ನು ತಹಶೀಲ್ದಾರ್ ಗ್ರೇಡ್–1 ಹುದ್ದೆಗೆ ಪರಿಗಣಿಸಿ ಜ್ಯೇಷ್ಠತೆಯಲ್ಲಿ ತಮಗಿಂತ ಕಿರಿಯರಾದ ಅಧಿಕಾರಿಗಳಿಗೆ ಬಡ್ತಿ ನೀಡಿರುವುದರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಪದೋನ್ನತಿ ನೀಡುವಂತೆ ಕೋರಿರುತ್ತಾರೆ.

ತಹಶೀಲ್ದಾರ್ ಗ್ರೇಡ್–2 ವೃಂದದ ಅಧಿಕಾರಿಗಳನ್ನು ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಬಡ್ತಿ ನೀಡುವ ಬಗ್ಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (2) ದಿನಾಂಕ: 29–10–2007ರಂದು ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಇಲಾಖಾ ಮುಂಬಡ್ತಿ ಸಮಿತಿ ಸಭೆಯಲ್ಲಿನ ನಡವಳಿಯಂತೆ, ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ಇವರ ಸೇವಾ ವಿವರ ಮತ್ತು ಕಾರ್ಯನಿರ್ವಹಣಾ ವರದಿಗಳನ್ನು ಪರಿಶೀಲಿಸಿ, ಇವರು ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಬಡ್ತಿಗೆ ಅರ್ಹರೆಂದು ಸಮಿತಿಯು ಪರಿಗಣಿಸಿ, ಇವರ ವಿರುದ್ಧ 4 ಇಲಾಖಾ ವಿಚಾರಣೆ ಬಾಕಿ ಇರುವುದರಿಂದ, ಶಿಫಾರಸ್ಸನ್ನು ಮೊಹರಾದ ಲಕೋಟೆಯಲ್ಲಿರಿಸಲು ತೀರ್ಮಾನಿಸಿರುತ್ತದೆ.

ಶ್ರೀಮತಿ ಕೆ. ಹೆಚ್. ಭಾಗ್ಯವತಮ್ಮ, ತಹಶೀಲ್ದಾರ್ ಇವರ ಮೇಲಿನ 4 ಇಲಾಖಾ ವಿಚಾರಣೆಗಳಲ್ಲಿ ಆರೋಪದಿಂದ ದೋಷಮುಕ್ತಗೊಳಿಸಿ ಆದೇಶಿಸಿದ್ದರಿಂದ ಇವರಿಗೆ ಇವರಿಗಿಂತ ಜ್ಯೇಷ್ಠತೆಯಲ್ಲಿ ಕಿರಿಯರಾದ ಶ್ರೀ ಡಿ.ಪಿ. ಚವ್ಹಾಣ್ ಇವರ ಜೇಷ್ಠತಾ ಸಂಖ್ಯೆ: 3948 ಇವರಿಗೆ ತಹಶೀಲ್ದಾರ್

ಗ್ರೇಡ್–1 ವೃಂದಕ್ಕೆ ಪದೋನ್ನತಿ ನೀಡಿದ ದಿನಾಂಕ: 24–12–2007 ರಿಂದ ಪೂರ್ವಾನ್ವಯವಾಗಿ ಪದೋನ್ನತಿ ನೀಡುವ ಕುರಿತು ಕರ್ನಾಟಕ ನಾಗರೀಕ ಸೇವಾ (ಆರ್.ಪಿ.ಪಿ) ನಿಯಮಾವಳಿಗಳು 1978ರ ನಿಯಮ 2(1ಎ) ರನ್ವಯ ಬಡ್ತಿ ನೀಡುವ ಬಗ್ಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ಸರ್ಕಾರದ ದಿನಾಂಕ: 20–10–2010ರ ಪತ್ರದಲ್ಲಿ, ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ: 8–12–2010ರ ಪತ್ರದಲ್ಲಿ, ಸರ್ಕಾರದ ಪ್ರಸ್ತಾವನೆಯನ್ನು ಆಯೋಗವು ಸರ್ಕಾರದ ಪ್ರಸ್ತಾವನೆಗೆ ಸಹಮತಿ ನೀಡಿದೆ ಎಂದು ತಿಳಿಸಿರುತ್ತದೆ.

ಪ್ರಸ್ತಾವನೆಯನ್ನು ಮರು ಪರಿಶೀಲಿಸಿದ್ದು, ದಿನಾಂಕ: 29–10–2007 ರಂದು ನಡೆದ ಇಲಾಖಾ ಪದೋನ್ನತಿ ಸಮಿತಿ ಸಭೆಯಲ್ಲಿ ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ತಹಶೀಲ್ದಾರ್ ರವರ ವಿರುದ್ಧ 4 ಇಲಾಖಾ ವಿಚಾರಣೆಗಳು ಬಾಕಿ ಇದ್ದು, ಈ ಮೊದಲೇ ಒಂದು ಪ್ರಕರಣದಲ್ಲಿ ಸರ್ಕಾರದ ಆದೇಶ ಸಂಖ್ಯೆ: ಕಂಇ 64 ಎಡಿಇ 2000 ದಿನಾಂಕ: 11–3–2005 ರಲ್ಲಿ ಸದರಿಯವರ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ರಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಲಾಗಿದ್ದು, ಈ ದಂಡನೆ ಅವಧಿಯು ದಿನಾಂಕ: 11–3–2005 ರಿಂದ 11–3–2007 ರವರೆಗೆ 2 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ರಹಿತವಾಗಿ ತಡೆಹಿಡಿದಿರುವ ಬಗ್ಗೆ ಲೆಕ್ಕ ಹಾಕಿ ಇವರ ದಂಡನಾ ಅವಧಿ ದಿನಾಂಕ: 11–3–2007 ರಲ್ಲಿ ಮುಕ್ತಾಯವಾಗಿರುವುದನ್ನು ಪರಿಗಣಿಸಿ ದಿನಾಂಕ: 24–7–2007 ರ ಇಲಾಖಾ ಮುಂಬಡ್ತಿ ಸಮಿತಿ ಸಭೆಯಲ್ಲಿ ಪದೋನ್ನತಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಲಾಗಿದೆ. ಮಹಾಲೇಖಪಾಲರು ದಿನಾಂಕ: 21–4–2010ರ ಪತ್ರದಲ್ಲಿ ನೀಡಿರುವ ಮಾಹಿತಿಯನ್ವಯ ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ತಹಶೀಲ್ದಾರ್ ಇವರ ವಾರ್ಷಿಕ ವೇತನ ಬಡ್ತಿಯ ದಿನಾಂಕ: 1–2–2005ರಂದು ಇರುವುದರಿಂದ ಇವರ ಸರ್ಕಾರಿ ಆದೇಶ ಸಂಖ್ಯೆ: 11–3–2005 ರಲ್ಲಿ ಆದೇಶಿಸಿದಂತೆ ಎರಡು ವಾರ್ಷಿಕ ವೇತನವನ್ನು ದಿನಾಂಕ: 1–2–2006 ಮತ್ತು 2–2–2007 ರಂದು ತಡೆಹಿಡಿಯಲಾಗಿರುತ್ತದೆ ಎಂದು ತಿಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ, ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ತಹಶೀಲ್ದಾರ್ ರವರು ದಿನಾಂಕ: 31–1–2008 ರವರೆಗೆ ದಂಡನಾ ಅವಧಿಯಲ್ಲಿ ಇರುತ್ತಾರೆ. ಆದುದರಿಂದ, ಇವರಿಗೆ ದಿನಾಂಕ: 24–12–2007 ರಿಂದ ಪದೋನ್ನತಿಯನ್ನು ಪರಿಗಣಿಸಲು ಅವಕಾಶವಿರುವುದಿಲ್ಲ. ಕಾರಣ ಈಗಾಗಲೇ ದಿನಾಂಕ: 29–10–2007 ರಲ್ಲಿ ಪದೋನ್ನತಿ ನೀಡಲು ತೀರ್ಮಾನಿಸಿರುವುದರಿಂದ ಇವರಿಗೆ ದಿನಾಂಕ: 24–12–2007ರ ಬದಲಾಗಿ ದಿನಾಂಕ: 1–2–2008 ರಿಂದ ಜಾರಿಗೆ ಬರುವಂತೆ ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಬಡ್ತಿಯನ್ನು ನೀಡಲು ಸರ್ಕಾರವು ನಿರ್ಧರಿಸಿದ್ದು, ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 508 ಎಎಸ್‌ಡಿ 2010, ಬೆಂಗಳೂರು, ದಿನಾಂಕ: 31–01–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕೆ.ಹೆಚ್. ಭಾಗ್ಯವತಮ್ಮ, ತಹಶೀಲ್ದಾರ್, ಕಂದಾಯ ಅಧಿಕಾರಿ, ಬಿ.ಎಂ.ಟಿ.ಎಫ್, ಬೆಂಗಳೂರು ಇವರಿಗೆ ಕರ್ನಾಟಕ ನಾಗರೀಕ ಸೇವಾ (ಆರ್.ಪಿ.ಪಿ) ನಿಯಮಾವಳಿಗಳು 1978ರ ನಿಯಮ 2(1ಎ) ರನ್ವಯ ದಿನಾಂಕ: 1–2–2008ರಿಂದ ಜಾರಿಗೆ ಬರುವಂತೆ ತಹಶೀಲ್ದಾರ್ ಗ್ರೇಡ್–1 ಹುದ್ದೆಗೆ ಪೂರ್ವಾನ್ವಯವಾಗಿ ಪದೋನ್ನತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್ 453

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲ್ಲೂಕಿನ ಶಿರೋಳ ಗ್ರಾಮದ ಹತ್ತಿರ ಇರುವ ಹಳೆಯದಾದ ಮತ್ತು ಹಾಳಾಗಿರುವ ದತ್ತಭಾಗ ಕೆರೆಯ ಜಾಗದಲ್ಲಿ ಹೊಸಕೆರೆ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಕುರಿತು.

ಓದಲಾಗಿದೆ:
1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ: ಮುಇಂ/ಸನೀ/(ಉ)ವ/ಬಿಜೆಪಿ/ಎಇ–6/2010–11/51 ದಿನಾಂಕ 05.01.2011
2) ಸರ್ಕಾರದ ಆದೇಶದ ಸಂಖ್ಯೆ ಸನೀಇ 106 ಮಸಾವಿ 2006 ದಿನಾಂಕ 26.10.2006.
3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ)ವಲಯ, ಬೆಂಗಳೂರು ರವರ ದಿನಾಂಕ 22/01/2011ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/08–09/249.

ಪ್ರಸ್ತಾವನೆ:

ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲ್ಲೂಕಿನ ಶಿರೋಳ ಗ್ರಾಮದ ಹತ್ತಿರ ಇರುವ ಹಳೆಯದಾದ ಮತ್ತು ಹಾಳಾಗಿರುವ ದತ್ತಭಾಗ ಕೆರೆಯ ಜಾಗದಲ್ಲಿ ಹೊಸಕೆರೆ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಮೇಲೆ (2) ರಲ್ಲಿ ಓದಲಾದ ದಿನಾಂಕ 26.10.2006 ರ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ ಹಾಗೂ ಮುಖ್ಯ ಇಂಜಿನಿಯರ್ ರವರು ನೋಂದಣಿ ಸಂಖ್ಯೆ 257/2006–07 ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 18–11–2010 |
| ವಿಜಯ ಕರ್ನಾಟಕ ದಿನಪತ್ರಿಕೆ | 17–11–2010 |
| ಡೆಕ್ಕನ್ ಹೆರಾಲ್ಡ್ ಆಂಗ್ಲ ದಿನಪತ್ರಿಕೆ | 18–11–2010 |

ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರ್‌ನ್ನು ತೆರೆದು ಪರಿಶೀಲಿಸಲಾಗಿದ್ದು, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಟೆಂಡರ್‌ನಲ್ಲಿ ಭಾಗವಹಿಸಿದ್ದ ಒಬ್ಬ ಗುತ್ತಿಗೆದಾರರು ಅರ್ಹತೆ ಹೊಂದಿದ್ದು, ಅವರ ಆರ್ಥಿಕ ಬಿಡ್ ಅನ್ನು 02-12-2010 ರಂದು ತೆರೆಯಲಾಗಿದ್ದು, ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 1,13,00,623/- | |
| ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 1,75,52,737/- | |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಶ್ರೀ ಜಿ. ಮಸ್ತಾನಯ್ಯ ಪ್ರಥಮ ದರ್ಜೆ ಗುತ್ತಿಗೆದಾರರು | 1,88,48,353/- | 66.79 ಹೆಚ್ಚು | 7.38 ಹೆಚ್ಚು |

ಮೇಲ್ಕಂಡಂತೆ ಶ್ರೀ ಜಿ. ಮಸ್ತಾನಯ್ಯ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿರುವ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 7.38 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 06/01/2011 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,75,52,737/-ಗಳ ಮೇಲೆ ಶೇಕಡ 7.38 ರಷ್ಟು ಹೆಚ್ಚಿನ ದರಗಳಿಗೆ ಕಾಮಗಾರಿಯನ್ನು ಶ್ರೀ ಜಿ. ಮಸ್ತಾನಯ್ಯ, ಒಂದನೇ ದರ್ಜೆ ಗುತ್ತಿಗೆದಾರರಿಗೆ ವಹಿಸುವಂತೆ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3 ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ. ಸಮಿತಿಯ ಶಿಫಾರಸ್ಸನ್ನು ಪರಿಶೀಲಿಸಿ, ಟೆಂಡರನ್ನು ಪರಿಷ್ಕೃತ ಮೊತ್ತದ ಮೇಲೆ ಶೇಕಡ 2.00 ರಷ್ಟು ಹೆಚ್ಚಿನ ದರಗಳಲ್ಲಿ ಅಂದರೆ ರೂ 1,79,03,792/- ಗಳಿಗೆ ಕಾಮಗಾರಿಯನ್ನು ಶ್ರೀ ಜಿ. ಮಸ್ತಾನಯ್ಯ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

ಸರ್ಕಾರದ ಆದೇಶ ಸಂಖ್ಯೆ: ಸನೀಇ 01 ಹೊಕೆನಿ 2011, ಬೆಂಗಳೂರು, ದಿನಾಂಕ 4ನೇ ಫೆಬ್ರವರಿ 2011.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲ್ಲೂಕಿನ ಶಿರೋಳ ಗ್ರಾಮದ ಹತ್ತಿರ ಇರುವ ಹಳೆಯದಾದ ಮತ್ತು ಹಾಳಾಗಿರುವ ದತ್ತಭಾಗ ಕೆರೆಯ ಜಾಗದಲ್ಲಿ ಹೊಸಕೆರೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ 1,75,52,737/-ಗಳ ಮೇಲೆ ಶೇಕಡ 2.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,79,03,792/- ಗಳಿಗೆ (ಒಂದು ಕೋಟಿ ಎಪ್ಪತ್ತೊಂಬತ್ತು ಲಕ್ಷದ ಮೂರು ಸಾವಿರದ ಏಳೂ ನೂರ ತೊಂಬತ್ತೆರಡು ರೂ.ಗಳು ಮಾತ್ರ) ಶ್ರೀ ಜಿ. ಮಸ್ತಾನಯ್ಯ, ಒಂದನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20-01-2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್ 454

## ಕಾರ್ಮಿಕ ಸಚಿವಾಲಯ

## ತಿದ್ದುಪಡಿ ಆದೇಶ

**ಸಂಖ್ಯೆ: ಕಾಇ 118 ಇಟಿಐ 2010. ಬೆಂಗಳೂರು, ದಿನಾಂಕ: 04/02/2011.**

ಸರ್ಕಾರಿ ಆದೇಶ ಸಂಖ್ಯೆ: ಕಾಇ 118 ಇಟಿಐ 2010 ದಿನಾಂಕ 30/08/2010ರ ಆದೇಶ ಭಾಗದಲ್ಲಿನ 12 ನಿಬಂಧನೆಗಳ ಪೈಕಿ ನಿಬಂಧನೆ 1ನ್ನು ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಭಾನುಮತಿ (ಪ್ರ)**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ. (ಉದ್ಯೋಗ ಮತ್ತು ತರಬೇತಿ)

ಪಿ.ಆರ್ 456

**. ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಕೆ. ರಾಯಪ್ಪ, ಹಿಂದಿನ ತಹಶೀಲ್ದಾರ್, ಬೀದರ್ ಜಿಲ್ಲೆ ಹಾಲಿ ನಿವೃತ್ತ ಮತ್ತು ಶ್ರೀ ಭೀಮಣ್ಣ, ದ್ವಿ.ದ.ಸ ತಹಶೀಲ್ದಾರ್ ಕಛೇರಿ, ಬೀದರ್ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಕುರಿತು–ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಕಂಇ 60 ಎಡಿಇ 2000 ದಿನಾಂಕ:7–1–2002.
2) ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಅ.ಸ.ಪತ್ರ ಸಂಖ್ಯೆ:ಕಾಂಪ್ಟ್/ಉಪಲೋಕ್/ಜಿಎಲ್‌ಬಿ–114/2000–2001/ಪಿಪಿದಿನಾಂಕ:13–2–2003.
3) ಸರ್ಕಾರದ ಆದೇಶ ಸಂಖ್ಯೆ: ಕಂಇ 60 ಎಡಿಇ 2000 ದಿನಾಂಕ: 6–6–2003.
4) ಮಾನ್ಯ ಲೋಕಾಯುಕ್ತರು, ಕರ್ನಾಟಕ ಇವರ ಪತ್ರ ಸಂಖ್ಯೆ: LOK/ARE-4/Enq-20/2008 ದಿನಾಂಕ: 15/19–6–2010.64

**ಪ್ರಸ್ತಾವನೆ:**

ಶ್ರೀ ಕೆ. ರಾಯಪ್ಪ, ಹಿಂದಿನ ತಹಶೀಲ್ದಾರ್, ಬೀದರ್ (ಹಾಲಿ ನಿವೃತ್ತರು), ಶ್ರೀ ಭೀಮಣ್ಣ, ದ್ವಿ.ದ.ಸ ಮತ್ತು ಶ್ರೀ ಮೆಹಬೂಬ ಪಟೇಲ್, ಖಾಸಗಿ ವ್ಯಕ್ತಿ, ತಹಶೀಲ್ದಾರ್ ರವರ ಕಛೇರಿ, ಬೀದರ್ ಇವರುಗಳ ವಿರುದ್ಧ ದಿನಾಂಕ: 11–7–2000 ರಂದು ಕರ್ನಾಟಕ ಲೋಕಾಯುಕ್ತರು ಬೀಸಿದ ಟ್ರಾಪ್ ಬಲೆಯಲ್ಲಿ ಸಿಕ್ಕಿಬಿದ್ದಿದ್ದರಿಂದ, ಗುನ್ನೆ ಸಂಖ್ಯೆ: 2/2000ನ್ನು ಬೀದರ್ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯವರ ಅಂತಿಮ ವರದಿ ನಕಲು ಮತ್ತು ತನಿಖಾ ದಾಖಲಾತಿಗಳನ್ನು ಮಾನ್ಯ ಅಪರ ಆರಕ್ಷಕ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ: 2–5–2001ರ ಪತ್ರದೊಡನೆ ಕಳುಹಿಸಿ, ಆಪಾದಿತ ನೌಕರರು ಲಂಚ ನಿರೋಧಕ ಕಾಯ್ದೆ, 1988ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿದ್ದ ಕಾರಣ, ಆರೋಪಿ–1 ಶ್ರೀ ಕೆ. ರಾಯಪ್ಪ, ಹಿಂದಿನ ತಹಶೀಲ್ದಾರ್, ಬೀದರ್ ಮತ್ತು ಆಪಾದಿತ–2 ಶ್ರೀ ಭೀಮಣ್ಣ, ದ್ವಿ.ದ.ಸ ಇವರು ಲಂಚ ನಿರೋಧಕ ಕಾಯ್ದೆ 1988 ರ ಕಲಂ7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2) ಪ್ರಕಾರ ಹಾಗೂ ಆಪಾದಿತ–3 ಶ್ರೀ ಮೆಹಬೂಬ್ ಪಟೇಲ್, ಖಾಸಗಿ ವ್ಯಕ್ತಿ ಇವರು ಲಂಚ ನಿರೋಧಕ ಕಾಯ್ದೆ 1988ರ ಕಲಂ 8 ಮತ್ತು ಕಲಂ 12 ರ ಪ್ರಕಾರ ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಕೋರಿರುತ್ತಾರೆ. ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ: (1) ಸರ್ಕಾರದ ದಿನಾಂಕ: 7–1–2002ರ ಆದೇಶದಲ್ಲಿ, ಲಂಚ ನಿರೋಧ ಕಾಯ್ದೆ 1988ರ ಕಲಂ 19(1)(ಬಿ) ಪ್ರಕಾರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತ ಅಧಿಕಾರಿಯದ ಶ್ರೀ ಕೆ. ರಾಯಪ್ಪ, ಹಿಂದಿನ ತಹಶೀಲ್ದಾರ್, ಬೀದರ್ ಇವರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 7(13)(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2) ಪ್ರಕಾರ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜಿಸಲು ಆದೇಶಿಸಿದೆ.

ಶ್ರೀ ಕೆ. ರಾಯಪ್ಪ, ಹಿಂದಿನ ತಹಶೀಲ್ದಾರ್, ಬೀದರ್ (ಹಾಲಿ ನಿವೃತ್ತರು) ಮತ್ತು ಶ್ರೀ ಭೀಮಣ್ಣ, ದ್ವಿ.ದ.ಸ, ತಾಲ್ಲೂಕು ಕಛೇರಿ, ಬೀದರ್ ಇವರು ಪರಿಹಾರಧನ ಮಂಜೂರು ಮಾಡುವ ಸಂಬಂಧ ಶ್ರೀ ಜಗನ್ನಾಥ ಇವರಿಂದ ದಿನಾಂಕ: 11–7–2000 ರಂದು ಅಕ್ರಮ ಸಂಭಾವನೆ ಪಡೆಯುತ್ತಿದ್ದಾಗ ಲೋಕಾಯುಕ್ತ ಪೊಲೀಸ್‌ರವರಿಗೆ ಸಿಕ್ಕಿಬಿದ್ದ ಹಿನ್ನೆಲೆಯಲ್ಲಿ, ಕರ್ನಾಟಕ ಲೋಕಾಯುಕ್ತ ಕಾಯ್ದೆಯ ಕಲಂ 7(2)ರನ್ವಯ ತನಿಖೆ ಜರುಗಿಸಿ, ತನಿಖೆಯಿಂದ ಆರೋಪಿತ ವಿರುದ್ಧದ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗಿರುವುದಾಗಿದೆ ಎಂದು ಅಭಿಪ್ರಾಯಪಟ್ಟು ಆರೋಪಿತರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ದಿನಾಂಕ: 13–2–2003ರ ಪತ್ರದೊಡನೆ ಕಳುಹಿಸಿಕೊಟ್ಟಿರುವ 12(3)ರ ವರದಿಯಲ್ಲಿ ನಿಬಂಧಕರು, ಕರ್ನಾಟಕ ಲೋಕಾಯುಕ್ತ ಇವರು ಅಭಿಪ್ರಾಯ ಪಟ್ಟಿದ್ದರ ಹಿನ್ನೆಲೆಯಲ್ಲಿ, ಪ್ರಕರಣವನ್ನು ಸರ್ಕಾರವು ಪರಿಶೀಲಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ದಿನಾಂಕ: 6–6–2003ರ ಸರ್ಕಾರದ ಆದೇಶದಲ್ಲಿ, ಶ್ರೀ ಕೆ. ರಾಯಪ್ಪ, ಹಿಂದಿನ ತಹಶೀಲ್ದಾರ್, ಬೀದರ್ (ಹಾಲಿ ನಿವೃತ್ತರು) ಮತ್ತು ಶ್ರೀ ಭೀಮಣ್ಣ, ದ್ವಿ.ದ.ಸ, ತಾಲ್ಲೂಕು ಕಛೇರಿ, ಬೀದರ್ ತಾಲ್ಲೂಕು ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ–14ಎ ರನ್ವಯ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214(2)(ಬಿ)(1)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 11 ಮತ್ತು 11ಎ ರನ್ವಯ ಇಲಾಖಾ ವಿಚಾರಣೆ ಜರುಗಿಸಿ ವರದಿ ನೀಡಲು ಪ್ರಕರಣವನ್ನು ಮಾನ್ಯ ಲೋಕಾಯುಕ್ತರು, ಬೆಂಗಳೂರು ಇವರಿಗೆ ವಹಿಸಿಕೊಟ್ಟು ಸರ್ಕಾರವು ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (4)ಮಾನ್ಯ ಲೋಕಾಯುಕ್ತರು, ಕರ್ನಾಟಕ ಇವರ ದಿನಾಂಕ: 15/19–6–2010ರ ಪತ್ರ ಹಾಗೂ ವಿಚಾರಣಾ ವರದಿಯನ್ನು ಕಳುಹಿಸಿದ್ದು, ಪ್ರಕರಣದ ಕುರಿತು ವಿಚಾರಣೆ ನಡೆಸಿದ Additional Registrar of Enquiries (4), ಕರ್ನಾಟಕ ಲೋಕಾಯುಕ್ತ,, ಬೆಂಗಳೂರು ರವರು ದಿನಾಂಕ: 28–5–2010ರಂದು ವಿಚಾರಣಾ ವರದಿ ಸಲ್ಲಿಸಿ, ಶ್ರೀ ಕೆ. ರಾಯಪ್ಪ, ಹಿಂದಿನ ತಹಶೀಲ್ದಾರ್, ಬೀದರ್ (ಹಾಲಿ ನಿವೃತ್ತರು) ಮತ್ತು ಶ್ರೀ ಭೀಮಣ್ಣ, ದ್ವಿ.ದ.ಸ, ತಾಲ್ಲೂಕು ಕಛೇರಿ, ಬೀದರ್ ಇವರುಗಳ ವಿರುದ್ಧದ ಆಪಾದನೆಗಳು ರುಜುವಾತಾಗಿಲ್ಲವೆಂದು ತಿಳಿಸಿದ್ದು, ಸದರಿ ದಾಖಲೆಗಳನ್ನು ಹಾಗೂ ವಿಚಾರಣಾ ವರದಿಗಳನ್ನು ಮಾನ್ಯ ಲೋಕಾಯುಕ್ತರು ಪರಿಶೀಲಿಸಿ, ಮೇಲಿನ ಆಪಾದಿತ ನೌಕರರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ತಿಳಿಸಿರುತ್ತಾರೆ.

ಮಾನ್ಯ ಲೋಕಾಯುಕ್ತರು ಸಲ್ಲಿಸಿರುವ ವಿಚಾರಣಾ ವರದಿಯನ್ನು ಸರ್ಕಾರವು ಪರಿಶೀಲಿಸಿ, ಶ್ರೀ ಕೆ. ರಾಯಪ್ಪ, ಹಿಂದಿನ ತಹಶೀಲ್ದಾರ್, ಬೀದರ್ (ಹಾಲಿ ನಿವೃತ್ತರು) ಮತ್ತು ಶ್ರೀ ಭೀಮಣ್ಣ, ದ್ವಿ.ದ.ಸ, ತಾಲ್ಲೂಕು ಕಛೇರಿ, ಬೀದರ್ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 60 ಎಡಿಇ 2000, ಬೆಂಗಳೂರು, ದಿನಾಂಕ: 2–2–2011.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಕೆ. ರಾಯಪ್ಪ, ಹಿಂದಿನ ತಹಶೀಲ್ದಾರ್, ಬೀದರ್ (ಹಾಲಿ ನಿವೃತ್ತರು) ಮತ್ತು ಶ್ರೀ ಭೀಮಣ್ಣ, ದ್ವಿ.ದ.ಸ, ತಾಲ್ಲೂಕು ಕಛೇರಿ, ಬೀದರ್ ಇವರುಗಳ ವಿರುದ್ಧ ಹೂಡಲಾದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್ 457

## FOREST, ECOLOGY AND ENVIRONMENT SECRETARIAT

Sub: Diversion of 0.4545 ha. in Sy.No. 30 of Ashanal Block RF and Handarki Ft.Sy.No. 249/1 of Yadagiri Division for laying of Optical Fibre Cable from Hattikuni to Handarki in favour of Divisional Engineer, BSNL, Optical Fibre Project, Hubli.

Read: 1. Letter No. A5 (4)GFL.CR.50/09-10, dated : 18-10-2010 of Principal Chief Conservator of Forests, Bangalore.

2. Government of India letter No. F.No.11-9/98-FC, dated : 21-11-2005, 26-12-2007 and 08-04-2009.

**PREAMBLE:**

The Principal Chief Conservator of Forests, Bangalore vide his letter dated 18-10-2009 read at (1) above has submitted the proposal for diversion of 0.4545 ha. of forest land in Sy.No.30 of Ashanal Block RF and Handarki Forest Sy.No. 249/1 in Yadagiri Division under the Forest (Conservation) Act, 1980 and as per the General approval of Government of India guidelines dated : 21-11-2005, 26-12-2007 and 08-04-2009 cited under reference (2) above for laying of Optical Fibre Cable from Hattikuni to Handarki in favour of Divisional Engineer, BSNL., Optical Fibre Project, Hubli subject to certain conditions.

The proposal has been examined in detail and hence the order.

**Government Order No.: FEE 172 FLL 2010, Bangalore, Dated: 08-02-2011**

In the circumstances explained in the preamble above, Government are pleased to accord approval under Forest (Conservation) Act, 1980 and as per the General approval of guidelines dated : 21-11-2005, 26-12-2007 and 08-04-2009 of the Government of India for diversion 0.4545 ha. in Sy.No. 30 of Ashanal Block RF and Handarki Ft.Sy.No. 249/1 of Yadagiri Division for laying of Optical Fibre Cable from Hattikuni to Handarki in favour of Divisional Engineer, BSNL., Optical Fibre Project, Hubli subject to the following conditions.

1. The legal status of the forest land shall remain unchanged and it shall continue as forest land.
2. The lease tenure is for 30 (Thirty) years.
3. The lessee shall pay lease rent as fixed by the Government from time to time.
4. The leased out area should be used for the purpose for which it is granted. In case the land is not used for the stipulated purpose within one year or when it no longer needed for the stipulated purpose, the area should be forfeited to the Forest Department under Section 82 of Karnataka Forest Act, 1963. The concerned Deputy conservator of Forests is authorized to take necessary action in this regard.
5. The Karnataka Forest Act 1963 and Rules 1969 and other relevant Acts and Rules will be applicable for any violation.
6. The User Agency should not sub-lease, mortgage and hypothecate the forest area.
7. The opened trench shall be refilled properly after laying the OFC and there shall not be any scope for soil erosion through this trench.
8. No Tree shall be felled for laying the OFC and no damages should be caused to flora.
9. The User Agency shall ensure that there should be no damage to the wildlife and its habitat.
10. The User Agency has to abide by all the terms and conditions as laid by the Government of India, Ministry of Environment and Forests.
11. The User Agency shall abide by all the conditions imposed upon by the Government of India, the Government of Karnataka and the Principal Chief Conservator of Forests (HoFF).

By Order and in the name of the Governor of Karnataka

**H.M. Mallikarjuna Swamy**

PR. No.458

Under Secretary to Government

Forest, Ecology and Environment Department

## FOREST, ECOLOGY AND ENVIRONMENT SECRETARIAT

Sub: Diversion of 39.70 ha of forest land in Doni Village, Mundargi Taluk, Gadag Division/District for establishment of Wind Power Project in favour of M/s Bhoruka Power Corporation Limited, Bangalore.

Read: 1. Letter No. A5(2)GFL.CR.07/05-06, wind dated : 04-01-2010 of Principal Chief Conservator of Forests, Bangalore.

2. State Government letter No. FEE 03 FLL 2010, dated : 31-03-2010.
3. Letter No. 4-KRC 698/2010-BAN/7129, dated : 13-05-2010 of Government of India, Ministry of Environment and Forests, Regional Office, Southern Zone, Bangalore.
4. Letter No. A5(2)GFL.CR.07/05-06, dated : 04-08-2010 of Principal Chief Conservator of Forests, Bangalore.
5. State Government letter No. FEE 03 FLL 2010, dated : 15-11-2010.
6. Letter No. 4-KRC 698/2010-BAN/dated : 21-12-2010 of Government of India, Ministry of Environment and Forests, Regional Office, Southern Zone, Bangalore.
7. State Government letter No. FEE 03 FLL 2010, dated : 23-12-2010.
8. Letter No. A5(3)GFL.CR.07/05-06, dated : 14-01-2011 of Principal Chief Conservator of Forests, Bangalore.

**PREAMBLE:**

The Principal Chief Conservator of Forests, Bangalore vide his letter dated 04-01-2010 read at (1) above has submitted the proposal to obtain the approval of Government of India under Section 2 of the Forest (Conservation) Act, 1980 for diversion of 39.70 ha of forest land in Doni Village, Mundargi Taluk, Gadag Division/District for establishment of Wind Power Project in favour of M/s Bhoruka Power Corporation Limited, Bangalore subject to certain conditions.

Accordingly the proposal was recommended to Government of India vide State Government letter dated 31-03-2010 read at (2) above.

The Government of India, Ministry of Environment and Forests, Regional office, Bangalore vide their letter dated 13-05-2010 read at (3) above has given its approval in Principle (Stage-I) for diversion of 39.70 ha of forest land in Doni Village, Mundargi Taluk, Gadag Division/District for establishment of Wind Power Project in favour of M/s Bhoruka Power Corporation Limited, Bangalore for compliance.

The Principal Chief Conservator of Forests, Bangalore vide his letter dated 04-08-2010 furnished the compliance report read at (4) above and the same has been sent to Government of India vide State Government letter dated : 15-11-2010 read at (5) above.

Government of India Ministry of Environment and Forests, Regional Office, South Zone, Bangalore vide their letter dated 21-12-2010 read at (6) above has conveyed its approval (Stage-II) under Section 2 of the Forest (Conservation) Act, 1980 for diversion of 39.70 ha of forest land in Doni Village, Mundargi Taluk, Gadag Division/District for establishment of Wind Power Project in favour of M/s Bhoruka Power Corporation Limited, Bangalore subject to certain conditions along with two specific conditions stating that State Government to withdraw the overlapping area of 35.56 ha. of forest land given to Ramgad Minerals and Mining Ltd., for prospecting license for survey and investigation of gold. Secondly in W.P. 64357/10 filed by M/s Ramgad Minerals and Mining Ltd., the user agency have to agree to comply with the Hon'ble High Court Order.

Accordingly Government letter has been forwarded to Principal Chief Conservator of Forests on dated : 23-12-2010 to comply the two specific conditions through the user agency letter read at (7) above.

Principal Chief Conservator of Forests has furnished a report vide his letter dated : 04-01-2011 read at (8) above to the specific two conditions i.e., Conservator of Forests, Dharwad has withdrawn the overlapping area of 35.56 ha. of forest land assigned to M/s Ramgad Minerals and Mining Limited vide his letter dated : 05-01-2011 for prospecting license for survey and investigation of gold and for the 2$^{nd}$ specific conditions he has furnished copy of the letter of undertaking received from M/s Bhoruka Power Corporation Ltd.

The proposal has been examined in detail and hence the order.

**Government Order No.: FEE 03 FLL 2010, Bangalore, Dated: 01-02-2011**

In the circumstances explained in the preamble above, Government are pleased to accord sanction under Section 2 of the Forest (Conservation) Act, 1980 for diversion of 39.70 ha. of forest land in Doni Village, Mundargi Taluk, Gadag Division/District for establishment of Wind Power Project in favour of M/s Bhoruka Power Corporation Limited, Bangalore subject to the following conditions.

1. The legal status of the forest land shall remain unchanged.
2. Compensatory Afforestation shall be raised over of equivalent identified non-forest land at Nagendragad village in Ron Taluk of Gadag District, at the cost of user agency. The State Government shall obtain prior permission of Central Government for change of location and schedule of Compensatory Afforestation if any.
3. Non-forest land identified for compensatory afforestation shall be notified by the State Government as RF/PF under Indian Forest Act, 1927 or the State Forest Act within a period of 6 months and Nodal Officer (FCA) shall report the compliance within 6 months.
4. The user agency shall demarcate the project area by creating cairns (60 cm high) with available stones and indicate the marking of forward and backward bearing this cairns. After construction of approach road as per the project plan, this cairns shall be substituted by four feet high RCC pillars at the project cost indicating on each pillar the forward and backward bearing as well as distance between the adjacent pillars .
5. The alignment of roads in the proposed area shall be done by a recognized firm and got approved by the Deputy Conservator of Forests concerned before implementation of the project. The approach road will, however, be available for use of the Forest Department or any person authorized by the Forest Department.
6. Additional amount of the Net Present Value (NPV) of the diverted forest land if any, becoming due after revision of the same by the Hon'ble Supreme Court of India in future shall be charged by the State Government from the user agency. The user agency shall furnish an undertaking to this effect.
7. The Lease period shall be for 30 years as per the guidelines issued by Ministry of Environment and Forests (MOEF) vide letter No. 8-84/2002-FC, dated : 14-05-2004. In case the user agency proposes to transfer the lease in favour of developers, it shall be done within a period of 4 years from the date of issue of this approval. In case the developers fail to develop wind farm, the land shall be reverted back to Forest Department without any compensation.
8. The vane tips of the wind turbine shall be painted with orange colour to avoid bird hits. The location of the wind mill shall be such that it does not stand in the migratory path of the birds and is not near the breading sites of the migratory birds.
9. The user agency has to pay a lease rent of Rs. 30,000/- per MW realized for the period of lease in addition to the compensatory afforestation, Net Present Value, etc. This amount shall be utilized in providing gas connection to the local villagers under the Joint Forest Management Programme and the other conservation measures. This amount shall be deposited with Compensatory Afforestation Fund Management and Planning Authority.

10. About 65-70% of leased out area in the wind farm shall be utilized for developing medicinal plant gardens, if possible, by the State Forest Department at the project cost. The State Government may take the help of National Medicinal Plant Board in creating corridors of medicinal plant gardens. The intervening areas between two wind mills footprints should also be planted up by dwarf species of trees at the project cost.
11. Adequate fire protection measures, including employment of fire watchers and maintenance of fire lines etc., shall be undertaken by the user agency in and around the project area at its own cost.
12. Within the perimeters of wind farm, smaller turbines may be allowed for optimization of wind energy.
13. The wind turbines/wind mills to be used on forest land shall be approved for use in the country by the Ministry of New and Renewable Energy, Government of India.
14. The State Government shall ensure that the project area does not form part of any National Park/Sanctuary.
15. The total forest area utilized for the project shall not exceed 39.70 ha. In case the land is not taken over by the user agency or the same is not used for the stipulated purpose within a period of two years, then the area shall be taken back by the Forest Department.
16. The lessee shall pay the lease rent as fixed by the Government from time to time.
17. The leased out area should be used for the purpose for which it is granted. In case the land is not used for stipulated purpose within one year or when it is no longer needed for the stipulated purpose the area should be forfeited to the Forest Department under section 82 of the Karnataka Forest Act 1963. The Deputy Conservator of Forests, Gadag Division, Gadag is authorized to take necessary action in this regard. No residential buildings shall be permitted in the proposed area.
18. Compensatory afforestation shall be raised at the cost of user agency over equivalent non-forest land at the rate of prevailing at the time of approval (at present it is Rs. 94,000/- per ha.)
19. The Karnataka Forest Act 1963 and Rules 1969 will be applicable for any violation
20. The road proposed to be constructed shall be executed in such a way that it helps in soil and water conservation
21. The user agency should not sub-lease , mortgage and hypothecate the forest area.
22. The user agency has to pay the Net Present Value(NPV) of forest land diverted under this proposal as per the orders of the Hon'ble Supreme Court of India dated : 28-03-2008 and 09-05-2008 of I.A.No.826 in 556 of Writ Petition No. 202/1995.
23. The wind energy farm should be located at a safe distance (1KM or more) from the areas like National Parks and Sanctuaries, area of outstanding natural beauty, natural heritage sites of Archaeological importance, sites of special scientific interests and other important land scapes.
24. The distance of the wind mill turbines from the highways, villages and habitations etc., shall be at a safe distance, and in normal course, a distance of 300 meter would be considered safe.
25. Soil and moisture conservation measures like contour trenching gully checks, chick-dams, retaining walls, culverts, nala bunds, etc., shall be taken up on the hillocks supporting the wind mill at the cost of user agency.
26. Trees shall be felled only when it becomes necessary and under strict supervision of State Forest Department i.e., Deputy Conservator of Forests concerned.
27. The user agency shall pay the cost of extraction of trees if available as estimated by the Department (Deputy Conservator of Forests).
28. The user agency shall ensure that there should be no damage to the available wildlife.
29. The approval under the Forest (Conservation) Act, 1980 is subject to the clearance under the Environment (Protection) Act 1986, if required.
30. The user agency while executing the agreement has to register the Deed with the concerned Jurisdictional Sub-Registrar as per the prevailing rate of Stamp Duty and Registration fee.
31. The user agency has to abide by all the terms and conditions imposed upon by the Government of India and the Government of Karnataka.
32. All the earth (soil) cut for formation of road and for levelling of land or for any purpose shall be transported in vehicles to foot-hill site and such soil shall be used to create nala bunds (Barrage across small streams) in the area where wind project area drains its precipitation.
33. Strict road alignment with sufficient soil and moisture conservation works such as retaining wall, stone pitching, check dams, gully checks, etc., have to be under taken by the user agency.
34. The outer periphery of the forests have to be covered with chain link fencing on either side of the project area by the user agency to conserve the natural flora and fauna.
35. The cost of affected plantation as estimated by the Forest Department (Deputy Conservator of Forests concerned) have to be paid by the user agency.
36. Any other condition to be stipulated by Government of India/State Government/Principal Chief Conservator of Forests, Karnataka in the interest of conservation of forests.

By Order and in the name of the Governor of Karnataka

**H.M. Mallikarjuna Swamy**

Under Secretary to Government

Forest, Ecology and Environment Department

PR. No.459

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆಯ ಬದಾಮಿ ತಾಲ್ಲೂಕಿನ ನೆಲೋಗಿ ಗ್ರಾಮದ ಸ.ನಂ. 46/1, 46/2, 46/3, 46/5ಕ್ಕೆ ಏತ ನೀರಾವರಿ ಯೋಜನೆ ಮೂಲಕ ನೀರಾವರಿ ಸೌಲಭ್ಯ ಕಲ್ಪಿಸುವ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ :**
1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ : ಮುಇಂ/ಸನೀ(ಉ)ವ/ಬಿಜೆಪಿ/ಎಇ–6/2010–11/65 ದಿನಾಂಕ : 05–01–2011.
2. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ : 22–01–2011ರ ಪತ್ರ ಸಂಖ್ಯೆ : ಮುಸದ/ಆಪ್ತಶಾಖೆ/ಟೆಂಡರ್/08–09/249.

**ಪ್ರಸ್ತಾವನೆ:**

ಬಾಗಲಕೋಟೆ ಜಿಲ್ಲೆಯ ಬದಾಮಿ ತಾಲ್ಲೂಕಿನ ನೆಲೋಗಿ ಗ್ರಾಮದ ಸ.ನಂ. 46/1, 46/2, 46/3, 46/5 ಕ್ಕೆ ಏತ ನೀರಾವರಿ ಯೋಜನೆ ಮೂಲಕ ನೀರಾವರಿ ಸೌಲಭ್ಯ ಕಲ್ಪಿಸುವ ಕಾಮಗಾರಿಯ ರೂ. 14.30 ಲಕ್ಷ ಮೊತ್ತದ ಅಂದಾಜಿಗೆ 2010–11ನೇ ಸಾಲಿನಲ್ಲಿ ವಿಶೇಷ ಘಟಕ ಯೋಜನೆಯಡಿ ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಬೆಳಗಾವಿ ರವರ ಕಛೇರಿ ನೋಂದಣಿ ಸಂಖ್ಯೆ : 170/2010–11 ರಲ್ಲಿ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 15–10–2010 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 19–10–2010 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರನ್ನು ತೆರೆದು ಪರಿಶೀಲಿಸಲಾಗಿದ್ದು, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಟೆಂಡರ್‌ನಲ್ಲಿ ಭಾಗವಹಿಸಿದ್ದ ಮೂರು ಜನ ಗುತ್ತಿಗೆದಾರರ ಪೈಕಿ ಒಬ್ಬರು ಗುತ್ತಿಗೆದಾರರು ಅರ್ಹತೆ ಹೊಂದಿದ್ದು, ಅವರ ಟೆಂಡರಿನ ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಇಡಲಾದ ಮೊತ್ತ | | | | ರೂ. 11,08,634/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಟೆಂಡರಿಗೆ ಇಡಲಾದ ಮೊತ್ತ | | | | ರೂ. 12,24,800/– |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡವಾರು ಹೆಚ್ಚಳ/ಕಡಿಮೆ |
| 1. | ಶ್ರೀ ಎಲ್.ಎಂ.ಯಂಡಿಗೇರಿ ಪ್ರಥಮ ದರ್ಜೆ ಗುತ್ತಿಗೆದಾರರು | 13,61,922/– | 22.85 ಹೆಚ್ಚು | 11.20 ಹೆಚ್ಚು |

ಮೇಲ್ಕಂಡಂತೆ ಶ್ರೀ ಎಲ್.ಎಂ.ಯಂಡಿಗೇರಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 11.20 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 06–01–2011ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 12,24,800/–ಗಳ ಮೇಲೆ ಶೇ. 7.50 ರಷ್ಟು ಹೆಚ್ಚಿನ ದರಗಳಿಗೆ ಕಾಮಗಾರಿಯನ್ನು ಶ್ರೀ ಎಲ್.ಎಂ.ಯಂಡಿಗೇರಿ, ಒಂದನೇ ದರ್ಜೆ ಗುತ್ತಿಗೆದಾರರಿಗೆ ವಹಿಸುವಂತೆ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 2 ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ. ಸಮಿತಿಯ ಶಿಫಾರಸ್ಸನ್ನು ಪರಿಶೀಲಿಸಿ, ಟೆಂಡರನ್ನು ಪರಿಷ್ಕೃತ ಮೊತ್ತದ ಮೇಲೆ ಶೇಕಡ 4.00 ರಷ್ಟು ಹೆಚ್ಚಿನ ದರಗಳಲ್ಲಿ ಅಂದರೆ ರೂ. 12,73,792/– ಗಳಿಗೆ ಕಾಮಗಾರಿಯನ್ನು ಶ್ರೀ ಎಲ್.ಎಂ.ಯಂಡಿಗೇರಿ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 02 ಏನೀಯೋ 2011, ಬೆಂಗಳೂರು, ದಿನಾಂಕ: 04–02–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆಯ ಬದಾಮಿ ತಾಲ್ಲೂಕಿನ ನೆಲೋಗಿ ಗ್ರಾಮದ ಸ.ನಂ. 46/1, 46/2, 46/3, 46/5 ಕ್ಕೆ ಏತ ನೀರಾವರಿ ಯೋಜನೆ ಮೂಲಕ ನೀರಾವರಿ ಸೌಲಭ್ಯ ಕಲ್ಪಿಸುವ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 12,24,800/–ಗಳ ಮೇಲೆ ಶೇಕಡ 4.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 12,73,792/– ಗಳಿಗೆ (ಹನ್ನೆರಡು ಲಕ್ಷ ಎಪ್ಪತ್ತ ಮೂರು ಸಾವಿರದ ಏಳು ನೂರ ತೊಂಬತ್ತೆರಡು ರೂ.ಗಳು ಮಾತ್ರ) ಶ್ರೀ ಎಲ್.ಎಂ.ಯಂಡಿಗೇರಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 460

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು, ಹಳೇಗುದ್ದನಕೊಪ್ಪ ಗ್ರಾಮದ ಬಳಿ ಕುಮುದ್ವತಿ ನದಿಗೆ ಅಡ್ಡಲಾಗಿ ಸೇತುವೆ ನಿರ್ಮಾಣ ಕಾಮಗಾರಿಯ–ಬಾಕಿ ಕೆಲಸದ ಟೆಂಡರ್ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸನೀಇ 59 ಅಪಿಬಂ 2007 ದಿನಾಂಕ : 08–03–2007.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ : ಮುಸ(ದ)ತಾಂ.3/ಸ.ಇಂ.8/ಶಿವಮೊಗ್ಗ/ಇ–ಟೆಂಡರ್ :/2010–11/81 ದಿನಾಂಕ : 06–01–2011.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ : 22–01–2011ರ ಪತ್ರ ಸಂಖ್ಯೆ : ಮುಸದ/ಆಪ್ತಶಾಖೆ/ಟೆಂಡರ್/08–09/249.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರೂ. 130.00 ಲಕ್ಷ ಮೊತ್ತ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ಬೆಂಗಳೂರುರವರ ನೋಂದಣಿ ಸಿ.ಇ.ಆರ್. ಸಂಖ್ಯೆ : 246/2006–07 ದಿನಾಂಕ : 29–03–2007ರಲ್ಲಿ ಅಂದಾಜಿಗೆ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಸದರಿ ಕಾಮಗಾರಿಯನ್ನು ಟೆಂಡರ್ ಮುಖಾಂತರ ಶ್ರೀ ಕರಿಬಸಪ್ಪ ಇವರಿಗೆ ವಹಿಸಲಾಗಿತ್ತು. ಸದರಿ ಗುತ್ತಿಗೆದಾರರು ಕಾಮಗಾರಿ ಪ್ರಗತಿಯಲ್ಲಿದ್ದ ಸಮಯದಲ್ಲಿ ನಿಧನರಾಗಿದ್ದು ವಾರಸುದಾರರು ಕಾಮಗಾರಿ ಮುಂದುವರೆಸದ ಕಾರಣ ಇವರ ಟೆಂಡರನ್ನು ರದ್ದುಪಡಿಸಿ ಬಾಕಿ ಕಾಮಗಾರಿಗೆ ಟೆಂಡರ್ ಕರೆಯಲಾಗಿದೆ.

ಈ ಬಾಕಿ ಕಾಮಗಾರಿಯನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಶಿವಮೊಗ್ಗ ಜಿಲ್ಲಾ ಟೆಂಡರ್ ಬುಲೆಟಿನ್ | 30–10–2010 |
| ಕನ್ನಡ ಪ್ರಭ ದಿನ ಪತ್ರಿಕೆ | 17–11–2010 |

ಟೆಂಡರ್‌ನ ತಾಂತ್ರಿಕ ಬಿಡ್‌ಅನ್ನು ದಿನಾಂಕ : 26–11–2010ರಂದು ತೆರೆದು ಪರಿಶೀಲಿಸಲಾಗಿ, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಹಾಗೂ ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ಅನ್ನು 29–11–2010ರಂದು ತೆರೆಯಲಾಗಿದೆ. ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಇಡಲಾದ ಮೊತ್ತ | | | | ರೂ. 56,87,240/– |
| 2010–11ನೇ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಂತೆ ಪರಿಷ್ಕೃತ ಟೆಂಡರಿಗೆ ಇಡಲಾದ ಮೊತ್ತ | | | | ರೂ. 78,04,069/– |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ದರಗಳ ಮೇಲಿನ ಶೇಕಡವಾರು ಹೆಚ್ಚಳ/ಕಡಿಮೆ | ಪರಿಷ್ಕೃತ ದರಗಳ ಮೇಲಿನ ಶೇಕಡವಾರು ಹೆಚ್ಚಳ/ಕಡಿಮೆ |
| 1. | ಶ್ರೀ ಬಿ.ಡಿ. ಶಿವಶಂಕರಪ್ಪ 1ನೇ ದರ್ಜೆ ಗುತ್ತಿಗೆದಾರರು, ಶಿಕಾರಿಪುರ | 89,90,068/– | 58.07 ಹೆಚ್ಚು | 15.20 ಹೆಚ್ಚು |
| 2. | ಟಿ.ವಿ. ಲಕ್ಷ್ಮಿರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು, ಶಿವಮೊಗ್ಗ | 1,22,55,096/– | 115.48 ಹೆಚ್ಚು | 57.03 ಹೆಚ್ಚು |

ಮೇಲ್ಕಂಡಂತೆ ಶ್ರೀ ಬಿ.ಡಿ. ಶಿವಶಂಕರಪ್ಪ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 15.20 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 06–01–2011ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 78,04,069/–ಗಳ ಮೇಲೆ ಶೇ. 7.50 ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಯನ್ನು ಶ್ರೀ ಬಿ.ಡಿ. ಶಿವಶಂಕರಪ್ಪ, ಒಂದನೇ ದರ್ಜೆ ಗುತ್ತಿಗೆದಾರರು ಇವರಿಗೆ ವಹಿಸುವಂತೆ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3 ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ. ಸಮಿತಿಯ ಶಿಫಾರಸ್ಸನ್ನು ಪರಿಶೀಲಿಸಿ, ಟೆಂಡರನ್ನು ಪರಿಷ್ಕೃತ ಮೊತ್ತದ ಮೇಲೆ ಶೇಕಡ 3.00 ರಷ್ಟು ಹೆಚ್ಚಿನ ದರಗಳಲ್ಲಿ ಅಂದರೆ ರೂ. 80,38,191/– ಗಳಿಗೆ ಕಾಮಗಾರಿಯನ್ನು ಶ್ರೀ ಬಿ.ಡಿ. ಶಿವಶಂಕರಪ್ಪ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 5 ಅಪಿಬಂ 2011, ಬೆಂಗಳೂರು, ದಿನಾಂಕ: 04–02–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು, ಹಳೇಗುದ್ದನಕೊಪ್ಪ ಗ್ರಾಮದ ಬಳಿ ಕುಮುದ್ವತಿ ನದಿಗೆ ಅಡ್ಡಲಾಗಿ ಸೇತುವೆ ನಿರ್ಮಾಣ ಬಾಕಿ ಕೆಲಸದ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 78,04,069/–ಗಳ ಮೇಲೆ ಶೇ. 3.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 80,38,191/–ಗಳಿಗೆ

(ರೂ. ಎಂಬತ್ತು ಲಕ್ಷ ಮುವತ್ತೆಂಟು ಸಾವಿರದ ಒಂದು ನೂರ ತೊಂಬತ್ತೊಂದು) ಕಾಮಗಾರಿಯನ್ನು ಶ್ರೀ ಬಿ.ಡಿ.ಶಿವಶಂಕರಪ್ಪ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20-01-2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 461 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ತೊದಲಬಾಗಿ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ :**

1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ : ಮುಇಂ/ಸನೀ(ಉ)ವ/ಬಿಜೆಪಿ/ಎಇ-6/2010-11/64 ದಿನಾಂಕ : 05-01-2011.
2. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ : 22-01-2011ರ ಪತ್ರ ಸಂಖ್ಯೆ : ಮುಸದ/ಆಪ್ತಶಾಖೆ/ಟೆಂಡರ್/08-09/249.

**ಪ್ರಸ್ತಾವನೆ:**

ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ತೊದಲಬಾಗಿ ಗ್ರಾಮದ ಸ.ನಂ. 223/1, 226, 226ಅ, 226ಬ, 226ಕ ರಲ್ಲಿ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ರೂ. 50.00 ಲಕ್ಷ ಮೊತ್ತದ ಅಂದಾಜಿಗೆ 2010-11ನೇ ಸಾಲಿನಲ್ಲಿ ವಿಶೇಷ ಘಟಕ ಯೋಜನೆಯಡಿ ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಬೆಳಗಾವಿ ರವರ ಕಛೇರಿ ನೋಂದಣಿ ಸಂಖ್ಯೆ : 139/2010-11 ರಲ್ಲಿ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 15-10-2010 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 19-10-2010 |

ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರನ್ನು ತೆರೆದು ಪರಿಶೀಲಿಸಲಾಗಿದ್ದು, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಟೆಂಡರ್‌ನಲ್ಲಿ ಭಾಗವಹಿಸಿದ್ದ ಇಬ್ಬರು ಗುತ್ತಿಗೆದಾರರ ಪೈಕಿ ಒಬ್ಬರು ಗುತ್ತಿಗೆದಾರರು ಅರ್ಹತೆ ಹೊಂದಿದ್ದು, ಅವರ ಟೆಂಡರಿನ ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರ್‌ಗೆ ಇಡಲಾದ ಮೊತ್ತ | | | ರೂ. 47,52,322/- | |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ(2010-11) ಟೆಂಡರಿಗೆ ಇಡಲಾದ ಮೊತ್ತ | | | ರೂ. 50,61,625/- | |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡವಾರು ಹೆಚ್ಚಳ/ಕಡಿಮೆ |
| 1. | ಶ್ರೀ ವಿ. ಎಂ. ಹೆಬ್ಬಾಳ<br>ಪ್ರಥಮ ದರ್ಜೆ ಗುತ್ತಿಗೆದಾರರು | 62,98,123/- | 32.53<br>ಹೆಚ್ಚು | 24.43<br>ಹೆಚ್ಚು |

ಮೇಲ್ಕಂಡಂತೆ ಶ್ರೀ ವಿ. ಎಂ. ಹೆಬ್ಬಾಳ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 24.43 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 06-01-2011ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 50,61,625/-ಗಳ ಮೇಲೆ ಶೇ. 7.50 ರಷ್ಟು ಹೆಚ್ಚಿನ ದರಗಳಿಗೆ ಕಾಮಗಾರಿಯನ್ನು ಶ್ರೀ ವಿ. ಎಂ. ಹೆಬ್ಬಾಳ, ಒಂದನೇ ದರ್ಜೆ ಗುತ್ತಿಗೆದಾರರಿಗೆ ವಹಿಸುವಂತೆ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 2 ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ. ಸಮಿತಿಯ ಶಿಫಾರಸ್ಸನ್ನು ಪರಿಶೀಲಿಸಿ, ಟೆಂಡರನ್ನು ಪರಿಷ್ಕೃತ ಮೊತ್ತದ

ಮೇಲೆ ಶೇಕಡ 4.00 ರಷ್ಟು ಹೆಚ್ಚಿನ ದರಗಳಲ್ಲಿ ಅಂದರೆ ರೂ. 52,64,090/– ಗಳಿಗೆ ಕಾಮಗಾರಿಯನ್ನು ಶ್ರೀ ವಿ.ಎಂ. ಹೆಬ್ಬಾಳ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 03 ಏನೀಯೋ 2011, ಬೆಂಗಳೂರು, ದಿನಾಂಕ: 04–02–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ತೊದಲಬಾಗಿ ಗ್ರಾಮದ ಸ.ನಂ. 223/1, 226, 226ಅ, 226ಬ, 226ಕ ರಲ್ಲಿ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 50,61,625/–ಗಳ ಮೇಲೆ ಶೇಕಡ 4.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 52,64,090/– ಗಳಿಗೆ (ಐವತ್ತೆರಡು ಲಕ್ಷ ಅರವತ್ತ ನಾಲ್ಕು ಸಾವಿರದ ತೊಂಬತ್ತು ರೂ.ಗಳು ಮಾತ್ರ) ಶ್ರೀ ವಿ.ಎಂ.ಹೆಬ್ಬಾಳ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪಿ.ಆರ್. 462

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಶಿಕ್ಷಣ ಸಚಿವಾಲಯ

**ವಿಷಯ :** ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿನ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ ಮತ್ತು ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಗಳಲ್ಲಿ ಉಪನ್ಯಾಸಕರು (ಕಾರ್ಯಾನುಭವ) ಹುದ್ದೆಗಳನ್ನು ಬಡ್ತಿ ಮೂಲಕ ತುಂಬಲು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ತಿದ್ದುಪಡಿ ಕಾಯ್ದಿರಿಸಿ, ಕಾರ್ಯಕಾರಿ ಆದೇಶದ ಮೂಲಕ ನೇಮಕಾತಿ ವಿಧಾನವನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಇಡಿ 57 ಎಂಪಿಇ 92, ದಿನಾಂಕ : 14–07–1992.
2. ಸರ್ಕಾರದ ಆದೇಶ ಸಂಖ್ಯೆ : ಇಡಿ 62 ಎಂಪಿಇ 93, ದಿನಾಂಕ : 16–09–1993.
3. ಸರ್ಕಾರದ ಆದೇಶ ಸಂಖ್ಯೆ : ಇಡಿ 51 ಎಂಪಿಇ 92, ದಿನಾಂಕ : 30–07–1992.
4. ಸರ್ಕಾರದ ಆದೇಶ ಸಂಖ್ಯೆ : ಇಡಿ 61 ಎಂಪಿಇ 93, ದಿನಾಂಕ : 16–09–1993.
5. ಸರ್ಕಾರದ ಆದೇಶ ಸಂಖ್ಯೆ : ಇಡಿ 85 ಎಂಪಿಇ 93, ದಿನಾಂಕ : 27–07–1994.
6. ಸರ್ಕಾರದ ಆದೇಶ ಸಂಖ್ಯೆ : ಇಡಿ 73 ಡಿಪಿಐ 98, ದಿನಾಂಕ : 06–05–1998.
7. ಅಧಿಸೂಚನೆ ಸಂಖ್ಯೆ : ಡಿಪಿಎಆರ್ 03 ಎಸ್‌ಆರ್‌ಇ 99, ದಿನಾಂಕ : 27–12–2001.
8. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ : ಸಿ1(3) ವೈ.ಶಿ.ಬಡ್ತಿ–35/2001–02, ದಿನಾಂಕ : 09–10–2003.
9. ಅರೆ ಸರ್ಕಾರಿ ಪತ್ರ ಸಂಖ್ಯೆ : ಸಿ1(3)ವೈ.ಶಿ.ಬಡ್ತಿ–35/2001–02, ದಿನಾಂಕ : 06–11–2006 ಮತ್ತು ಪತ್ರ ದಿನಾಂಕ : 06–09–2008.
10. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ : ಸಿ1(6)ಡಯಟ್/ಸಿಟಿಇ/ಕಾ.ಹು.ಬಡ್ತಿ–26/2009–10, ದಿನಾಂಕ : 15–12–2009.

**ಪ್ರಸ್ತಾವನೆ:**

ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿನ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ ಮತ್ತು ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಗಳಿಗೆ ಅವಶ್ಯವಾಗಿರುವ ಬೋಧಕ ವರ್ಗದ ಹುದ್ದೆಗಳನ್ನು ಉಲ್ಲೇಖ (1) ರಿಂದ (5) ರವರೆಗಿನ ಆದೇಶಗಳಲ್ಲಿ ಸೃಜಿಸಲಾಗಿದೆ. ಅದರಂತೆ, ಪ್ರತಿ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯದಲ್ಲಿ ತಲಾ ಒಂದರಂತೆ 06 ಉಪನ್ಯಾಸಕರು (ಕಾರ್ಯಾನುಭವ) ಹುದ್ದೆಗಳು ಪ್ರತಿ ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಗಳಿಗೆ ತಲಾ ಒಂದರಂತೆ 20 ಹಿರಿಯ ಉಪನ್ಯಾಸಕರು (ಕಾರ್ಯಾನುಭವ) ಹುದ್ದೆಗಳು ಮತ್ತು ಪ್ರತಿ ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಗಳಿಗೆ 20 ಉಪನ್ಯಾಸಕರು (ಕಾರ್ಯಾನುಭವ) ಹುದ್ದೆಗಳು ಒಟ್ಟು 46 ಹುದ್ದೆಗಳನ್ನು ಸೃಜಿಸಲಾಗಿದೆ. ಈ ಹುದ್ದೆಗಳು ಕಾರ್ಯಾನುಭವ ವಿಷಯದ ಬೋಧಕ ಹುದ್ದೆಗಳಾಗಿದ್ದು, ಉಲ್ಲೇಖ (1) ರಿಂದ (5)ರಲ್ಲಿ ಸೃಜಿಸಿರುವ ಬೋಧಕ ವೃಂದದ ಎಲ್ಲಾ ಹುದ್ದೆಗಳನ್ನು ಉಲ್ಲೇಖ (6) ರಲ್ಲಿ ವೃಂದವಾರು ಕ್ರೋಢೀಕರಿಸಲಾಗಿದೆ. ಈ ರೀತಿ ಕ್ರೋಢೀಕರಿಸಿರುವ ಹುದ್ದೆಗಳಲ್ಲಿ ಉಲ್ಲೇಖ (6) ರ ಆದೇಶದ ಕ್ರಮ ಸಂಖ್ಯೆ : 3 ರಲ್ಲಿ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯಕ್ಕೆ 06 ಉಪನ್ಯಾಸಕರ ಹುದ್ದೆಗಳು ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಗೆ 20 ಹಿರಿಯ ಉಪನ್ಯಾಸಕರ ಹುದ್ದೆಗಳು ಅಂದರೆ ಒಟ್ಟು 26 ಹುದ್ದೆಗಳನ್ನು 218 ಹುದ್ದೆಗಳಲ್ಲಿ ಬೇರ್ಪಡಿಸುವುದು ಮತ್ತು ಇದೇ ಆದೇಶದ ಕ್ರಮ ಸಂಖ್ಯೆ : 4 ರಲ್ಲಿ ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಗೆ 20 ಉಪನ್ಯಾಸಕರ ಹುದ್ದೆಗಳನ್ನು ಒಟ್ಟು 340 ಹುದ್ದೆಗಳಲ್ಲಿ ಬೇರ್ಪಡಿಸಿ, ಪ್ರತ್ಯೇಕ ಆದೇಶ ಹೊರಡಿಸುವಂತೆ ಉಲ್ಲೇಖ (8)ರಲ್ಲಿ ಪ್ರಸ್ತಾಪಿಸಲಾಗಿದೆ.

ಮುಂದುವರೆದು, ಕಾರ್ಯಾನುಭವ ವಿಭಾಗದ ಉಪನ್ಯಾಸಕರು/ಹಿರಿಯ ಉಪನ್ಯಾಸಕರು ಹುದ್ದೆಗಳಿಗೆ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಶಿಫಾರಸ್ಸು ಮಾಡಲಾಗಿದ್ದು, ಇದರಲ್ಲಿ ಈ ಹುದ್ದೆಗಳಿಗೆ ಬಡ್ತಿ ಹೊಂದುವವರೆಗೂ ಸಾಮಾನ್ಯ ವಿದ್ಯಾರ್ಹತೆ, ಅನುಭವ ಜೊತೆಗೆ ಬಿ.ಇಡಿ ಶಿಕ್ಷಣ ಅಳವಡಿಸಿ,

ತಿದ್ದುಪಡಿಗಾಗಿ ಪ್ರಸ್ತಾವನೆ ಸಲ್ಲಿಸಲಾಗಿದ್ದು, ವೃಂದ ಮತ್ತು ನೇಮಕಾತಿ ನಿಯಮಗಳನ್ನು ರೂಪಿಸುವುದು ವಿಳಂಬವಾಗಿರುತ್ತದೆ. ಆದುದರಿಂದ, ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯದಲ್ಲಿ ಉಪನ್ಯಾಸಕರು (ಕಾರ್ಯಾನುಭವ) ಹುದ್ದೆಗಳು ಪ್ರತಿ ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಗಳಿಗೆ ಹಿರಿಯ ಉಪನ್ಯಾಸಕರು (ಕಾರ್ಯಾನುಭವ) ಹುದ್ದೆಗಳು ಮತ್ತು ಪ್ರತಿ ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಗಳಿಗೆ ಉಪನ್ಯಾಸಕರು (ಕಾರ್ಯಾನುಭವ) ಹುದ್ದೆಗಳಿಗೆ ವೃಂದ ಮತ್ತು ನೇಮಕಾತಿ ಕಾರ್ಯಕಾರಿ ಆದೇಶದ ಮೂಲಕ ನೇಮಕಾತಿ ವಿಧಾನವನ್ನು ಜಾರಿಗೊಳಿಸಲು ಪ್ರಸ್ತಾಪಿಸಲಾಗಿದೆ.

ಈ ಪ್ರಸ್ತಾವನೆ ಬಗ್ಗೆ ದಿನಾಂಕ : 16–03–2007 ರಂದು ಇಲಾಖಾ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಚರ್ಚಿಸಲಾಗಿದೆ. ಕೇಂದ್ರ ಸರ್ಕಾರದ ಆದೇಶದನ್ವಯ ರಾಜ್ಯದ ಸರ್ಕಾರಿ ಬಿ.ಇಡಿ ಕಾಲೇಜುಗಳನ್ನು ಸರ್ಕಾರಿ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ (ಸಿ.ಟಿ.ಇ.) ಹಾಗೂ ಸರ್ಕಾರಿ ಶಿಕ್ಷಕರ ತರಬೇತಿ ಕೇಂದ್ರಗಳನ್ನು ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಕೇಂದ್ರಗಳೆಂದು ಉನ್ನತೀಕರಿಸಿ ಸದರಿ ಸಂಸ್ಥೆಗಳಿಗೆ ಅಗತ್ಯವಿದ್ದ ಬೋಧಕ ವರ್ಗದ ಹುದ್ದೆಗಳನ್ನು ಸೃಜಿಸಲಾಗಿದ್ದು, ಈ ಹುದ್ದೆಗಳನ್ನು ಪ್ರಸ್ತುತ ಜಾರಿಯಲ್ಲಿರುವ ದಿನಾಂಕ : 27–12–2001 (ಉಲ್ಲೇಖ–7)ರಲ್ಲಿನ ಅಧಿಸೂಚನೆಯಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳಂತೆ ಸಾರ್ವಜನಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಯ ಸಮಾನಾಂತರ ವೇತನ ಶ್ರೇಣಿಯ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುತ್ತಿದ್ದು, ಪ್ರತಿ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯದಲ್ಲಿ ತಲಾ ಒಂದರಂತೆ 06 ಉಪನ್ಯಾಸಕರು (ಕಾರ್ಯಾನುಭವ) ಹುದ್ದೆಗಳು ಪ್ರತಿ ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಗಳಿಗೆ ತಲಾ ಒಂದರಂತೆ 20 ಹಿರಿಯ ಉಪನ್ಯಾಸಕರು (ಕಾರ್ಯಾನುಭವ) ಹುದ್ದೆಗಳು ಮತ್ತು ಪ್ರತಿ ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಗಳಿಗೆ 20 ಉಪನ್ಯಾಸಕರು (ಕಾರ್ಯಾನುಭವ) ಹುದ್ದೆಗಳು ಒಟ್ಟು 46 ಹುದ್ದೆಗಳನ್ನು ಸೃಜಿಸಲಾಗಿದ್ದು, ಈ ಉಪನ್ಯಾಸಕರು (ಕಾರ್ಯಾನುಭವ) ಹುದ್ದೆಗಳಿಗೆ ಆಯಾ ಫೀಡರ್ ಕೇಡರ್‌ಗಳಿಂದ ಮುಂಬಡ್ತಿ ನೀಡುವ ಮೂಲಕ ಭರ್ತಿ ಮಾಡಲು ಪ್ರತ್ಯೇಕ ವೃಂದ ಮತ್ತು ನೇಮಕಾತಿಗಳನ್ನು ರಚಿಸುವ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರು ಪ್ರಸ್ತಾಪಿಸಿದ್ದನ್ನು ವ್ಯಾಪಕವಾಗಿ ಚರ್ಚಿಸಿ ಸಿ.ಟಿ.ಇ. ಉಪನ್ಯಾಸಕರ (ಕಾರ್ಯಾನುಭವ) 6 ಹುದ್ದೆಗಳಿಗೆ ಮತ್ತು ಡಯಟ್‌ಗಳಲ್ಲಿನ 20 ಉಪನ್ಯಾಸಕರು (ಕಾರ್ಯಾನುಭವ) ಹುದ್ದೆಗಳನ್ನು ಉಳಿಸಿಕೊಳ್ಳಬಹುದೆಂದು ತೀರ್ಮಾನಿಸಲಾಯಿತು. ಅದರಂತೆ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರಚಿಸುವಂತೆ ನವೀಕೃತ ಪ್ರಸ್ತಾವನೆಯನ್ನು ಆಯುಕ್ತರ ಮುಖಾಂತರ ಸರ್ಕಾರಕ್ಕೆ ಕಳುಹಿಸುವಂತೆ ತೀರ್ಮಾನಿಸಲಾಯಿತು. ಉಲ್ಲೇಖ (9)ರಲ್ಲಿ ಉಪನ್ಯಾಸಕರು (ಕಾರ್ಯಾನುಭವ) ವೃಂದಗಳಿಗೆ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಕಾರ್ಯಕಾರಿ ಆದೇಶದ ಮೂಲಕ ಜಾರಿಗೊಳಿಸಲು ಪ್ರಸ್ತಾವನೆ ಸಲ್ಲಿಸಿದ್ದಾರೆ. ಉಲ್ಲೇಖ (10) ರಲ್ಲಿ ಈ ವೃಂದದ ಹುದ್ದೆಗಳನ್ನು ಮುಂಬಡ್ತಿ ಮೂಲಕ ತುಂಬಲು ವೃಂದ ಮತ್ತು ನೇಮಕಾತಿ ನಿಯಮಗಳ ಪರಿಷ್ಕರಣೆ/ತಿದ್ದುಪಡಿ ಕಾಯ್ದಿರಿಸಿ, ಆದೇಶ ಹೊರಡಿಸುವ ಪೂರ್ವದಲ್ಲಿ ಸ್ನಾತಕೋತ್ತರ ಪದವಿ ಜೊತೆಗೆ ಎಂ.ಇಡಿ ಅಥವಾ ಬಿ.ಇಡಿ ವಿದ್ಯಾರ್ಹತೆಯಂತೆ ಅರ್ಹರಾಗುವ ವಿಷಯ ಪರಿವೀಕ್ಷಕರು (ವೃತ್ತಿ ಶಿಕ್ಷಣ) ಹಾಗೂ ವೃತ್ತಿ ಶಿಕ್ಷಣ ಶಿಕ್ಷಕರು (ಗ್ರೇಡ್–1) ಅಭ್ಯರ್ಥಿಗಳ ಮಾಹಿತಿಯುಳ್ಳ ಪ್ರಸ್ತಾವನೆಯನ್ನು ಇಲಾಖಾ ಮುಖ್ಯಸ್ಥರು ಸಲ್ಲಿಸಿದ್ದಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ್ದು, ಸಾರ್ವಜನಿಕ ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಾವಳಿಗಳ ಪರಿಷ್ಕರಣೆ/ತಿದ್ದುಪಡಿಯಲ್ಲಿ ಈ ವೃಂದದ ಪ್ರಸ್ತಾವನೆ ಇಲ್ಲದಿರುವುದರಿಂದ ಹಾಗೂ ಈ ಹುದ್ದೆಗಳನ್ನು ಸೇರಿಸಿ ನಿಯಮಾವಳಿಗಳನ್ನು ರೂಪಿಸುವಲ್ಲಿ ವಿಳಂಬವಾಗುವುದನ್ನು ಮನಗೊಂಡು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 347 ಡಿಪಿಐ 2008, ಬೆಂಗಳೂರು, ದಿನಾಂಕ: 10–02–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಆಡಳಿತಾತ್ಮಕ ಕಾರಣಗಳ ಹಿನ್ನೆಲೆಯಲ್ಲಿ, ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯದಲ್ಲಿ (ಸಿ.ಟಿ.ಇ.) ತಲಾ ಒಂದರಂತೆ 06 ಉಪನ್ಯಾಸಕರು (ಕಾರ್ಯಾನುಭವ) ಹುದ್ದೆಗಳು ಮತ್ತು ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಗಳಿಗೆ (ಡಯಟ್) 20 ಉಪನ್ಯಾಸಕರು (ಕಾರ್ಯಾನುಭವ) ಹುದ್ದೆಗಳು ಈ ರೀತಿ ಒಟ್ಟು 26 ಹುದ್ದೆಗಳನ್ನು ಸಾಮಾನ್ಯ ವಿದ್ಯಾರ್ಹತೆ, ಅನುಭವ ಹಾಗೂ ಸ್ನಾತಕೋತ್ತರ ಪದವಿ ಜೊತೆಗೆ ಎಂ.ಇಡಿ ಅಥವಾ ಸ್ನಾತಕೋತ್ತರ ಪದವಿ ಜೊತೆಗೆ ಬಿ.ಇಡಿ ವಿದ್ಯಾರ್ಹತೆಯಂತೆ ನಿಯಮಾನುಸಾರ ಅರ್ಹರಾಗುವ ವಿಷಯ ಪರಿವೀಕ್ಷಕರು (ವೃತ್ತಿ ಶಿಕ್ಷಣ) ಮತ್ತು ವೃತ್ತಿ ಶಿಕ್ಷಣ ಶಿಕ್ಷಕರು (ಗ್ರೇಡ್–1) ವೃಂದದಿಂದ ತುಂಬಲು ವೃಂದ ಮತ್ತು ನೇಮಕಾತಿ ನಿಯಮಾವಳಿಗೆ ನೇಮಕಾತಿ ವಿಧಾನವನ್ನು ರೂಪಿಸುವುದನ್ನು ಕಾಯ್ದಿರಿಸಿ, ಈ ಆದೇಶದ ಅನುಬಂಧದಲ್ಲಿ ತೋರಿಸಿರುವಂತೆ ಕಾರ್ಯಕಾರಿ ಆದೇಶದ ಮೂಲಕ ನೇಮಕಾತಿ ವಿಧಾನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನಿಗಧಿಪಡಿಸಲಾಗಿದೆ.

1. ಈ ಕಾರ್ಯಕಾರಿ ಆದೇಶದ ಮುಖಾಂತರ ನಿಗಧಿಪಡಿಸಿದ ನೇಮಕಾತಿ ವಿಧಾನವು ಸದರಿ ಕಾರ್ಯಕಾರಿ ಆದೇಶವನ್ನು ಹೊರಡಿಸಿದ ದಿನಾಂಕದಿಂದ 6 ತಿಂಗಳ ಕಾಲ ಮಾತ್ರ ಜಾರಿಯಲ್ಲಿರುತ್ತದೆ.
2. 6 ತಿಂಗಳ ಒಳಗಾಗಿ ಈ ನೇಮಕಾತಿ ವಿಧಾನವನ್ನು ಶಿಕ್ಷಣ ಇಲಾಖೆಯು ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡಿ ಅಳವಡಿಸತಕ್ಕದ್ದು.
3. 6 ತಿಂಗಳ ಅವಧಿಯ ನಂತರ ಈ ಕಾರ್ಯಕಾರಿ ಆದೇಶವು ತನ್ನಿಂದ ತಾನೇ ರದ್ದಾಗುತ್ತದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಅಧಿಕೃತ ಜ್ಞಾಪನ ಸಂಖ್ಯೆ : ಸಿಆಸುಇ 38 ಸೇನಿಇ 96, ದಿನಾಂಕ : 01–08–1996 ರಲ್ಲಿ ಕಲ್ಪಿಸಿರುವ ಆಸ್ಪದಗಳನ್ವಯ ಹಾಗೂ ಟಿಪ್ಪಣಿ ಸಂಖ್ಯೆ : ಸಿಆಸುಇ 15 ಸೇನಿಇ 2010, ದಿನಾಂಕ : 07–12–2010 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್.ಸೋಮಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಆಡಳಿತ)

***Annexure to the Government Order No.ED 5347 DPI 2008, Dated 10-02-2011***

*PROPOSED CADRE & RECRUITMENT RULES WITH RESPECT TO THE POSTS OF LECTURERS (WORK EXPERIENCE) OF C.T.Es AND LECTURERS (WORK EXPERIENCE) OF DIETs*

| Sl.No. | Cadre and Scale of Pay | No. of Posts | Method of Recruitment | Minimum Qualification |
|---|---|---|---|---|
| 01 | Lecturer (Work Experience) College of Teacher Education (CTE) (Rs. 14050-25050) | 06 | By Promotion from the cadre of Lecturers (Work Experience) DIET/Subject Inspector Craft) | 1. Must be a holder of Master Degree in any Discipline recognized by the Govt of Karnataka and M.Ed., Degree or equivalent qualification and must be a holder of certificate or a Diploma or a degree in the concerned Craft Education.<br>Or<br>Must be a holder of Master Degree in any discipline and B.Ed., Degree or equivalent qualification with a Degree/Diploma in concerned Craft Education<br>And<br>2 Must have put in a minimum service of 03 years in the concerned Craft Class-II Cadre. |
| 02 | Lecturer (Work Experience) District Institute of Education & Training 11400-21600 | 20 | By promotion from the Cadre of Craft Teachers Grade-1 | 1. Must be holder of Master Degree of a University, recognized by Govt. of Karnataka with B.Ed or equivalent qualification and a certificate or a Diploma or Degree in concerned Craft Subjects with 03 years minimum service in the cadre of Craft Teacher, Grade-1<br>2. If no suitable candidates are available from Sl.No. 1 then from the craft teachers holding Bachelor Degree of a University, recognized by Govt. of Karnataka with B.Ed or equivalent qualification and a certificate or a Diploma or Degree in concerned Craft Subjects with 03 years minimum service in the cadre of Craft Teacher, Grade-1. |

**M.N. Somashekar**
Under Secretary to Govt.
Education Department
(Administration)

ಪಿ.ಆರ್. 477

**ಒಳಾಡಳಿತ ಸಚಿವಾಲಯ**

**ವಿಷಯ :** ಶರಣಾಗತಿಯಾದ ಎಡಪಂತೀಯ ತೀವ್ರಗಾಮಿಗಳ ಪುನರ್ವಸತಿ ವ್ಯವಸ್ಥೆಗಾಗಿ ಹಣವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರುರವರ ಪತ್ರ ಸಂಖ್ಯೆ : ಡಿಐಜಿಪಿ/ಎಎನ್‌ಎಫ್/33/2010–11, ದಿನಾಂಕ : 20–10–2010.
2. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 128 ಎಸ್‌ಎಸ್‌ಟಿ 2010, ದಿನಾಂಕ : 19–06–2010.

**ಪ್ರಸ್ತಾವನೆ:**

ಮೇಲ್ಕಂಡ ಓದಲಾದ (1)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿರವರು ತಮ್ಮ ಪತ್ರದಲ್ಲಿ ಎಡಪಂತೀಯ ತೀವ್ರಗಾಮಿಗಳು ಸಮಾಜದ ಮುಖ್ಯವಾಹಿನಿಗೆ ಮರಳುವಂತೆ ಮಾಡಲು ಸರ್ಕಾರ ಹಲವಾರು ಕಾರ್ಯಯೋಜನೆಗಳನ್ನು ರೂಪಿಸಿದ್ದು, ಸದರಿ ಆದೇಶದಲ್ಲಿ ಶರಣಾಗತಿಯಾದ ಎಡಪಂತೀಯ ತೀವ್ರಗಾಮಿಗಳ ಪುನರ್ವಸತಿ ಕಲ್ಪಿಸಲು ಅನೇಕ ಯೋಜನೆಗಳನ್ನು ರೂಪಿಸಲಾಗಿರುತ್ತದೆ. ಸರ್ಕಾರದ ಈ ಯೋಜನೆಗಳಿಂದ ಪ್ರೇರಿತನಾದ ಹಗಲಗಂಚಿ ವೆಂಕಟೇಶ್ ನಕ್ಸಲೈಟ್ ಎಂಬುವರು ಶರಣಾಗತಿಯಾಗಿದ್ದು ನಕ್ಸಲೈಟ್ ಶರಣಾಗತಿ ಮತ್ತು ಅವರ ಪುನರ್ವಸತಿ ಸಂಬಂಧ ರಚಿಸಿರುವ ರಾಜ್ಯ ಸಮಿತಿಯ ಅನುಮೋದನೆ ಪ್ರಕಾರ ಈಗ ಶರಣಾಗಿರುವ ಮೇಲ್ಕಂಡ ನಕ್ಸಲೈಟ್‌ರವರಿಗೆ ರೂ. 1.00 ಲಕ್ಷಗಳನ್ನು ಪಾವತಿಸಬೇಕಾಗಿರುತ್ತದೆ. ಆದುದರಿಂದ, ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರುರವರು ಕೋರಿರುವಂತೆ ಈಗಾಗಲೇ ಶರಣಾಗತಿಯಾಗಿರುವ ಶ್ರೀ ಹಗಲಗಂಚಿ ವೆಂಕಟೇಶ್ ನಕ್ಸಲೈಟ್‌ರವರಿಗೆ ನೀಡಲು ತುರ್ತಾಗಿ ರೂ. 1.00 ಲಕ್ಷಗಳ ಅನುದಾನವನ್ನು ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರುರವರಿಗೆ ಬಿಡುಗಡೆ ಮಾಡಲು ಹಾಗು ಚಿಕ್ಕಮಗಳೂರು ಜಿಲ್ಲೆಯಲ್ಲಿ ಇನ್ನು 20–25 ಮಂದಿ ನಕ್ಸಲೈಟ್‌ರವರುಗಳು ಶರಣಾಗುವ ಸಾಧ್ಯತೆ ಇದೆ. ಆದಕಾರಣ, ಮುಂದೆ ಶರಣಾಗುವ ನಕ್ಸಲೈಟ್‌ರವರುಗಳಿಗೆ ತುರ್ತಾಗಿ ಪಾವತಿಸಲು ಅನುಕೂಲವಾಗುವಂತೆ ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರುರವರಿಗೆ ರೂ. 25.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ಡಿಜಿ ಮತ್ತು ಐಜಿಪಿರವರು ಕೋರಿದ್ದಾರೆ.

ಮೇಲೆ ಓದಲಾದ (2)ರ ಆದೇಶದಲ್ಲಿ, ಕರ್ನಾಟಕದಲ್ಲಿ ಎಡಪಂಥೀಯ ತೀವ್ರಗಾಮಿಗಳ ಶರಣಾಗತಿ ಮತ್ತು ಪುನಶ್ಚೇತನಕ್ಕೆ ಸಂಬಂಧಿಸಿದಂತೆ ಕಾರ್ಯನೀತಿಯನ್ನು ಹೊರಡಿಸಲಾಗಿದೆ.

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪುನಶ್ಚೇತನ ಸಲುವಾಗಿ ನೆರವಿನ ಪ್ರಯೋಜನಗಳನ್ನು ಕೆಂಪು ಪ್ರವರ್ಗಕ್ಕೆ ಮಾತ್ರ ಅನ್ವಯಿಸಬೇಕು ಮತ್ತು ಅವರು ಕರ್ನಾಟಕಕ್ಕೆ ಸೇರಿದವರಾಗಿರಬೇಕು. ಇತರ ಪ್ರವರ್ಗಗಳಿಂದ ಬಂದ ಜನರಿಗೆ ಒಳಾಡಳಿತ ಇಲಾಖೆಯ ರಹಸ್ಯ ಸೇವಾ ನಿಧಿಗಳ ಮೂಲಕ ಅಥವಾ ಸರ್ಕಾರದ ನಿಯತ ಯೋಜನೆಗಳ ಮೂಲಕ ಅವರ ಅರ್ಹತೆ ಮೇಲೆ ಅವಲಂಬಿಸಿ ಸೂಕ್ತವಾದ ನೆರವನ್ನು ನೀಡುವ ಬಗ್ಗೆ ಓದಲಾದ ಆದೇಶದಲ್ಲಿ ವಿವರಿಸಲಾಗಿದ್ದು, ಈ ಕಾರ್ಯನೀತಿ ಅನುಸಾರವಾಗಿ ಚಾಚೂ ತಪ್ಪದೇ ಪರಿಶೀಲಿಸಿ, ಅಗತ್ಯ ಕ್ರಮ ಕೈಗೊಳ್ಳುವಂತೆ ಸೂಚಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 477 ಎಸ್‌ಎಸ್‌ಟಿ 2010 ಬೆಂಗಳೂರು, ದಿನಾಂಕ: 09–02–2011.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಶರಣಾಗತಿಯಾದ ಎಡಪಂಥೀಯ ತೀವ್ರಗಾಮಿಗಳ ಪುನರ್ವಸತಿ ವ್ಯವಸ್ಥೆಗಾಗಿ ಮಹಾಲೇಖಪಾಲರು ಮತ್ತು ಡಿಜಿ ಮತ್ತು ಐಜಿಪಿರವರ ಕೋರಿಕೆಯನ್ವಯ ರೂ. 25.00 ಲಕ್ಷಗಳನ್ನು ಬಿಡುಗಡೆ ಮಾಡಿದೆ.

ಸದರಿ ಹಣವನ್ನು 2010–11ನೇ ಸಾಲಿಗೆ ಹೊಸ ಲೆಕ್ಕ ಶೀರ್ಷಿಕೆ 2055–00–800–0–21 "ನಕ್ಸಲೈಟ್‌ಗಳ ಶರಣಾಗತಿ ಮತ್ತು ಪುನರ್ವಸತಿ" ಯೋಜನೇತರ ಅಡಿಯಲ್ಲಿ ರೂ. 25.00 ಲಕ್ಷಗಳ ಹೆಚ್ಚುವರಿ ಅನುದಾನವನ್ನು ಪೂರಕ ಅಂದಾಜು–2 ರಲ್ಲಿ ಬಳಕೆ ಮಾಡತಕ್ಕದ್ದು.

ಸದರಿ ಹಣವನ್ನು ಕರ್ನಾಟಕದಲ್ಲಿ ಎಡಪಂತೀಯ ತೀವ್ರಗಾಮಿಗಳ ಶರಣಾಗತಿ ಮತ್ತು ಪುನಶ್ಚೇತನಕ್ಕೆ ಸಂಬಂಧಿಸಿದಂತೆ ಹೊರಡಿಸಲಾದ ಕಾರ್ಯನೀತಿ ಅನುಸಾರವಾಗಿಯೇ ಉಪಯೋಗಿಸಿಕೊಳ್ಳತಕ್ಕದ್ದು.

ಸದರಿ ಹಣವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 340 ವೆಚ್ಚ–11/2010, ದಿನಾಂಕ : 10–12–2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಸಿ.ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 478

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

**ವಿಷಯ :** ಕಾರಾಗೃಹಗಳ ಇಲಾಖೆಯಲ್ಲಿ ಖಾಲಿ ಇರುವ ವಾರ್ಡರ್ ಹುದ್ದೆಗಳನ್ನು ತುಂಬುವ ಬಗ್ಗೆ.

**ಓದಲಾಗಿದೆ :** ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ರವರ ಪತ್ರ ಸಂಖ್ಯೆ : ಇ4/ಸಿಆರ್–17/2010–11 ದಿನಾಂಕ : 16–11–2010.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ, ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು, ಇವರು ದಿನಾಂಕ : 31–03–2010ರ ಅಂತ್ಯಕ್ಕೆ ಕೊನೆಗೊಂಡಂತೆ ಕಾರಾಗೃಹ ಇಲಾಖೆಯಲ್ಲಿ ಮಂಜೂರಾದ ವಾರ್ಡರ್ ಹುದ್ದೆಗಳು 1228 ಇದ್ದು, ಆ ಪೈಕಿ 796 ಹುದ್ದೆಗಳನ್ನು ತುಂಬಲಾಗಿದ್ದು, 432 ಹುದ್ದೆಗಳು ಖಾಲಿ ಇರುತ್ತದೆ. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 29 ಪಿಆರ್‌ಇ 2006 ದಿನಾಂಕ : 20–03–2008ರಲ್ಲಿ 68 ವಾರ್ಡರ್ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಅನುಮತಿ ನೀಡಿರುತ್ತದೆ. ತದನಂತರ ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 36 ಪಿಆರ್ ಇ 2008 ದಿನಾಂಕ : 24–09–2008ರಲ್ಲಿ 112 ವಾರ್ಡರ್ ಹುದ್ದೆಗಳನ್ನು ಹಾಗೂ ಇಲಾಖೆಯಲ್ಲಿ ಹೊಸದಾಗಿ ನಿರ್ಮಾಣ ಮಾಡಿರುವ ಕಾರಾಗೃಹಗಳಿಗೆ ಹಾಗೂ ಉನ್ನತ ದರ್ಜೆಗೇರಿಸಲಾದ ಕಾರಾಗೃಹಗಳಿಗೆ 162 ವಾರ್ಡರ್ ಹುದ್ದೆಗಳನ್ನು ಮಂಜೂರು ಮಾಡಿದ್ದು, ಒಟ್ಟು 342 ವಾರ್ಡರ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಿಕೊಳ್ಳಲು ಅನುಮತಿ ನೀಡಿದ್ದು, ನೇರ ನೇಮಕಾತಿ ಪ್ರಕ್ರಿಯೆ ಜಾರಿಯಲ್ಲಿರುತ್ತದೆ. ದಿನಾಂಕ : 31–03–2010 ರಂದು ಇದ್ದಂತೆ ಇಲಾಖೆಯಲ್ಲಿ ಖಾಲಿ ಇರುವ 432 ವಾರ್ಡರ್ ಹುದ್ದೆಗಳ ಪೈಕಿ ಈಗಾಗಲೇ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಸರ್ಕಾರವು ಅನುಮತಿ ನೀಡಿರುವ 342 ಹುದ್ದೆಗಳ ಜೊತೆಗೆ ವಯೋನಿವೃತ್ತಿ ಮತ್ತು ಬಡ್ತಿಯಿಂದ ಖಾಲಿಯಾಗುವ 118 ವಾರ್ಡರ್ ಹುದ್ದೆಗಳನ್ನು ಸಹ ನೇರ ನೇಮಕಾತಿ ಮೂಲಕ ಭರ್ತಿ ಮಾಡಿಕೊಳ್ಳಲು ಸರ್ಕಾರದ ಶೀಘ್ರ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರವರು, ಬೆಂಗಳೂರು ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 11 ಪಿಆರ್‌ಇ 2011 ಬೆಂಗಳೂರು, ದಿನಾಂಕ: 11–02–2011.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಕಾರಾಗೃಹಗಳ ಇಲಾಖೆಗೆ ಗ್ರೂಪ್–'ಸಿ' ವೃಂದದ 75 ವಾರ್ಡರ್ (ವೇತನ ಶ್ರೇಣಿ ರೂ. 5,800–10,500) ಹುದ್ದೆಗಳನ್ನು ನಿಯಮಾನುಸಾರ ನೇರ ನೇಮಕಾತಿ ಮೂಲಕ ಭರ್ತಿ ಮಾಡುವುದಕ್ಕೆ ಸರ್ಕಾರವು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 33 ವೆಚ್ಚ–11/2011 ದಿನಾಂಕ : 09–02–2011ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಮತ್ತು ಸಾರಿಗೆ ಇಲಾಖೆ
(ಸೆರೆಮನೆ ಮತ್ತು ಸಿನಿಮಾ)

ಪಿ.ಆರ್. 479

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಶಿವಣ್ಣ, ಸಹಾಯಕ ಅಧೀಕ್ಷಕರು, ಶಿವಮೊಗ್ಗ ಜಿಲ್ಲಾ ಕಾರಾಗೃಹ (ಹಾಲಿ ತುಮಕೂರು ಜಿಲ್ಲಾ ಕಾರಾಗೃಹದಲ್ಲಿ ಸಹಾಯಕ ಅಧೀಕ್ಷಕರಾಗಿ, ಸೇವೆ ಸಲ್ಲಿಸುತ್ತಿದ್ದಾರೆ)ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣ–ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ :**

1. ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ(ಜಿ)/ಸಿಟಿಎಲ್–37/ಸಿಆರ್13/2009 ಶಿವಮೊಗ್ಗ ದಿನಾಂಕ : 06–04–2010.
2. ತನಿಖಾಧಿಕಾರಿಯ ಅಂತಿಮ ತನಿಖಾ ವರದಿ ದಿನಾಂಕ : 04–03–2010.
3. ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗಳ ಸಂಬಂಧಪಟ್ಟ ಕಡತಗಳು.
4. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 62 ಪಿಆರ್‌ಇ 2010 ದಿನಾಂಕ : 10–11–2010.

**ಪ್ರಸ್ತಾವನೆ:**

ಶ್ರೀ ಶಿವಣ್ಣ, ಸಹಾಯಕ ಅಧೀಕ್ಷಕರು, ಜಿಲ್ಲಾ ಕಾರಾಗೃಹ, ಶಿವಮೊಗ್ಗ (ಹಾಲಿ ತುಮಕೂರು ಜಿಲ್ಲಾ ಕಾರಾಗೃಹದಲ್ಲಿ ಸಹಾಯಕ ಅಧೀಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ) ಇವರ ವಿರುದ್ಧ ಲೋಕಾಯುಕ್ತ ಮೊಕದ್ದಮೆ ಸಂಖ್ಯೆ : 13/2009ರಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್ ಹಾಗೂ ತನಿಖಾಧಿಕಾರಿಗಳು, ಕರ್ನಾಟಕ ಲೋಕಾಯುಕ್ತ, ಶಿವಮೊಗ್ಗ ಇವರು ದಾಖಲಿಸಿರುವ ಪ್ರಕರಣದ ತನಿಖಾ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ : 06–04–2010ರ ಪತ್ರದೊಡನೆ ಕಳುಹಿಸುತ್ತಾ, ಆಪಾದಿತನನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧ ಕಾಯ್ದೆ, 1988ರ ಕಲಂ 19(1)ರ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಕಳುಹಿಸಿಕೊಟ್ಟ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1. ಶ್ರೀಮತಿ ಸುಶೀಲಮ್ಮ ಕೋಂ ಲೇಟ್ ಯಲ್ಲಪ್ಪ, ಶಿವಮೊಗ್ಗ ಇವರ ದೂರು ದಿನಾಂಕ : 17–11–2009.
2. ಪೊಲೀಸ್ ಇನ್ಸ್‌ಪೆಕ್ಟರ್ ಹಾಗೂ ತನಿಖಾಧಿಕಾರಿಗಳು, ಕರ್ನಾಟಕ ಲೋಕಾಯುಕ್ತ, ಶಿವಮೊಗ್ಗ ಇವರ ಪ್ರಥಮ ವರ್ತಮಾನ ವರದಿ, ಲೋಕಾಯುಕ್ತ ಮೊಕದ್ದಮೆ ಸಂಖ್ಯೆ : 13/2009.
3. ಟ್ರ್ಯಾಪ್ ಪೂರ್ವದ ಮಹಜರು, ಟ್ರ್ಯಾಪ್ ನಡವಳಿಗಳು.
4. ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ : ಲೋಕ್/ಎಸಿಇ/ಸಿಟಿಎ/19/2009–10 ದಿನಾಂಕ : 13–01–2010.
5. ಕೃತ್ಯ ನಡೆದ ಸ್ಥಳದ ನಕಾಶೆ.
6. ತನಿಖಾ ಕಾಲದಲ್ಲಿ ಅಮಾನತ್ತುಪಡಿಸಿಕೊಂಡಿರುವ ಮೂಲ ದಾಖಲೆಗಳ ದೃಢೀಕೃತ ನಕಲು ಪ್ರತಿಗಳು.
7. ಸಾಕ್ಷಿದಾರರುಗಳ ಹೇಳಿಕೆಗಳು :
   (1) ಶ್ರೀಮತಿ ಸುಶೀಲಮ್ಮ ಕೋಂ ಲೇಟ್ ಯಲ್ಲಪ್ಪ
   (2) ಶ್ರೀಮತಿ ಆರ್. ಮಂಜುಳ, ಕೋಂ ಲೇಟ್ ಶಿವಣ್ಣ ಗೌಡ
   (3) ಶ್ರೀ ಕೆ. ಗಣೇಶ್ ತಂದೆ ಕೃಷ್ಣನಾಯ್ಕ
   (4) ಶ್ರೀ ಡಿ.ಎಂ.ಶಶಿಧರ ಮೂರ್ತಿ ತಂದೆ ಮಲ್ಲಾಜಪ್ಪ
   (5) ಶ್ರೀ ಎನ್.ಲಕ್ಷ್ಮಣ ತಂದೆ ಲೇಟ್ ನಿಂಗಯ್ಯ
   (6) ಶ್ಯಾಮ್ @ ಕೊಕ್ಕರೆ ಶ್ಯಾಮ ತಂದೆ ಲೇಟ್ ಯಲ್ಲಪ್ಪ
   (7) ಶ್ರೀ ಬಿ.ಎಂ. ಧನಂಜಯ ಮೂರ್ತಿ ತಂದೆ ಬಿ. ಮಲ್ಲೇಗೌಡ
   (8) ಶ್ರೀ ಸಣ್ಣಪ್ಪ ಎನ್. ಕೋಣನತಲೆ, ಹೆಡ್ ಕಾನ್ಸ್‌ಟೇಬಲ್
   (9) ಶ್ರೀ ಜಿ.ಪಿ. ಬಸವರಾಜಪ್ಪ, ಪೊಲೀಸ್ ಹೆಡ್‌ಕಾನ್ಸ್‌ಟೇಬಲ್
   (10) ಶ್ರೀ ಬಿ. ಶ್ರೀನಿವಾಸ, ಸಿ.ಪಿ.ಸಿ.
   (11) ಶ್ರೀ ರಮೇಶ್ ಎಸ್. ಪೊಲೀಸ್ ಕಾನ್ಸ್‌ಟೇಬಲ್
   (12) ಶ್ರೀ ಐ.ಜೆ. ರಜನಿಕಾಂತ, ಪೊಲೀಸ್ ಕಾನ್ಸ್‌ಟೇಬಲ್
   (13) ಶ್ರೀ ಎ. ಮಂಜುನಾಥ, ಪೊಲೀಸ್ ಕಾನ್ಸ್‌ಟೇಬಲ್
   (14) ಶ್ರೀ ಆರ್. ಪ್ರಕಾಶ್, ಪೊಲೀಸ್ ಕಾನ್ಸ್‌ಟೇಬಲ್
8. ಲಂಚ ಕೇಳಲು ಆಧಾರವಾದ ದಾಖಲೆ.
9. ಆಪಾದಿತರ ಸಮಜಾಯಿಷಿ ಹೇಳಿಕೆಗಳು.
10. ಆಪಾದಿತ ಅಧಿಕಾರಿಯು ನೀಡಿರುವ ಸ್ವರಕ್ಷಣಾ ಹೇಳಿಕೆಯ ನಕಲು.

ತನಿಖಾಧಿಕಾರಿಗಳಾದ ಶ್ರೀ ಎಂ.ಎನ್. ಕರಿಬಸವನಗೌಡ, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಶಿವಮೊಗ್ಗ ಇವರು ಶ್ರೀ ಶಿವಣ್ಣ, ಸಹಾಯಕ ಅಧೀಕ್ಷಕರು, ಇವರ ವಿರುದ್ಧ ದಂಡನಾರ್ಹ ಪ್ರಕರಣವನ್ನು ಲೋಕಾಯುಕ್ತ ಮೊಕದ್ದಮೆ ಸಂಖ್ಯೆ : 13/2009 ಕಲಂ 7, 13(1)(ಡಿ) ಸಹವಾಚ 13(2) ಲಂಚ ನಿರೋಧ ಕಾಯ್ದೆ, 1988ರ ಪ್ರಕಾರ ಮೊಕದ್ದಮೆಯನ್ನು ದಾಖಲಿಸಿರುತ್ತಾರೆ.

ಫಿರ್ಯಾದಿಯಾದ ಶ್ರೀಮತಿ ಸುಶೀಲಮ್ಮ ಕೋಂ ಲೇಟ್ ಯಲ್ಲಪ್ಪ, ವಾಸ ಎಲ್ಐಜಿ 23, ಕಲ್ಲಹಳ್ಳಿ, ಹುಡ್ಕೋ ಕಾಲೋನಿ, ಶಿವಮೊಗ್ಗ ಇವರ ಇಬ್ಬರು ಮಕ್ಕಳು ವಿವಿಧ ಕೇಸುಗಳಲ್ಲಿ ಜೈಲಿನಲ್ಲಿದ್ದು, ಅದರಲ್ಲಿ ಒಬ್ಬ ಮಗ ಆನಂದ್ ಎಂಬುವವರನ್ನು ಈಗ್ಗೆ ಎರಡು ವರ್ಷಗಳ ಹಿಂದೆ ಧಾರವಾಡ ಜೈಲಿಗೆ ವರ್ಗಾಯಿಸಲಾಗಿದ್ದು, ಇನ್ನೊಬ್ಬ ಮಗ ಶ್ಯಾಮ, ಗಾಂಜಾ ಕೇಸಿನಲ್ಲಿ ಅರೆಸ್ಟ್ ಆಗಿದ್ದು, ಈ ಬಗ್ಗೆ ಸಹಾಯಕ ಅಧೀಕ್ಷಕರಾದ ಶ್ರೀ ಶಿವಣ್ಣ ಇವರು ಶ್ಯಾಮನನ್ನು ಸಹ ಬೇರೆ ಜೈಲಿಗೆ ಕಳುಹಿಸುತ್ತೇನೆಂದು ಇಲ್ಲದಿದ್ದರೆ ರೂ. 2000–00ಗಳ ಲಂಚಕ್ಕಾಗಿ ಒತ್ತಾಯಿಸಿದ್ದು, ಫಿರ್ಯಾದಿಯು ತಮ್ಮ ಮಗನನ್ನು ಬೇರೆ ಜೈಲಿಗೆ ಕಳುಹಿಸಬೇಡಿ ಎಂದು ತಮ್ಮಲ್ಲಿದ್ದ ರೂ. 1000/– ಕೊಟ್ಟಿರುತ್ತಾರೆಂದು, ಶ್ರೀ ಶಿವಣ್ಣನವರು ಇನ್ನೂ ರೂ. 1000/–ಕ್ಕೆ ಒತ್ತಾಯಿಸಿದ್ದರಿಂದ, ಆರೋಪಿತ ಅಧಿಕಾರಿಯಾದ ಶ್ರೀ ಶಿವಣ್ಣರವರ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದಿನಾಂಕ : 17–11–2009 ರಂದು ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮವನ್ನು ನೆರವೇರಿಸಿದ ನಂತರ ದಿನಾಂಕ : 17–11–2009 ರಂದು ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ, ಶ್ರೀ ಶಿವಣ್ಣ, ಸಹಾಯಕ ಅಧೀಕ್ಷಕರು, ಅಕ್ರಮ ಸಂಭಾವನೆಯಾದ ರೂ. 1000/–ಗಳನ್ನು ಪಡೆಯುತ್ತಿದ್ದಾಗ ಸಿಕ್ಕಿ ಹಾಕಿಕೊಂಡಿರುತ್ತಾರೆ, ಆಪಾದಿತ ಅಧಿಕಾರಿಯ ಎರಡೂ ಹಸ್ತದ ಕೈಬೆರಳುಗಳನ್ನು ತಯಾರಿಸಿಟ್ಟಿದ್ದ ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಅದ್ದಿ ತೊಳೆಸಿದಾಗ, ದ್ರಾವಣ ಬಣ್ಣ ಬದಲಾಗಿ ಆಪಾದಿತರು ಲಂಚದ ಹಣವನ್ನು ಸ್ವೀಕರಿಸಿರುವುದು ದೃಢಪಟ್ಟಿರುತ್ತದೆ ಹಾಗೂ ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ಅಕ್ರಮ ಸಂಭಾವನೆಯಾದ ರೂ. 1000/–ಗಳನ್ನು ಶ್ರೀ ಶಿವಣ್ಣ (ಹಣ ಪಡೆದ ವ್ಯಕ್ತಿ) ಇವರಿಂದ ಲಂಚದ ಹಣವನ್ನು ಯಥಾವತ್ತಾಗಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ. ಲೋಕಾಯುಕ್ತ ಅಧಿಕಾರಿಗಳು ಒದಗಿಸಿರುವ ಎಲ್ಲಾ ದಾಖಲೆಗಳನ್ನು ಸಾಕ್ಷ್ಯಗಳ ಹೇಳಿಕೆಗಳನ್ನು ಸಂದರ್ಭಗಳನ್ನು ಕೂಲಂಕಷವಾಗಿ ಪರಿಶೀಲಿಸಿದಾಗ ಆರೋಪಿತ ಸರ್ಕಾರಿ ಅಧಿಕಾರಿಯು ಫಿರ್ಯಾದುದಾರರಿಂದ ಲಂಚ ರೂ. 1000/–ಗಳನ್ನು ಸ್ವೀಕರಿಸಿರುವುದು ದೃಢಪಟ್ಟಿರುತ್ತದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ, 1988ರ ಅನ್ವಯ ಕಲಂ 7,13(1)(ಡಿ) ಜೊತೆಗೆ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರವು ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತನನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಲಂಚ ನಿರೋಧ ಕಾಯ್ದೆ 1988ರ ಕಲಂ 19(1)(ಬಿ)ರ ಅಡಿ ಆಪಾದಿತ ಸಾರ್ವಜನಿಕ ಅಧಿಕಾರಿಯಾದ ಶ್ರೀ ಶಿವಣ್ಣ, ಸಹಾಯಕ ಅಧೀಕ್ಷಕರು ಇವರನ್ನು ಕಲಂ 7 ಮತ್ತು 13(ಡಿ) ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಹೊಂದಿರುತ್ತದೆ. ಅದರಂತೆ ಮೇಲೆ (4)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ : 10–11–2010ರಲ್ಲಿ ಅಭಿಯೋಜನಾ ಮಂಜೂರಾತಿ ಆದೇಶವನ್ನು ಹೊರಡಿಸಲಾಗಿತ್ತು. ಆದರೆ ಸದರಿ ಸರ್ಕಾರದ ಆದೇಶದಲ್ಲಿ ಕೆಲವು ನ್ಯೂನತೆಗಳು ಕಂಡುಬಂದಿದ್ದರಿಂದ ಮೇಲೆ (4)ರಲ್ಲಿ ಓದಲಾದ ಆದೇಶವನ್ನು ರದ್ದುಪಡಿಸಿ, ಈ ಕೆಳಕಂಡಂತೆ ಪರಿಷ್ಕೃತ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 62 ಪಿಆರ್‌ಇ 2010 ಬೆಂಗಳೂರು, ದಿನಾಂಕ: 10–02–2011.**

ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 62 ಪಿಆರ್‌ಇ 2010, ದಿನಾಂಕ : 10–11–2010ನ್ನು ರದ್ದುಪಡಿಸಿದೆ. ಲಂಚ ನಿರೋಧ ಕಾಯ್ದೆ 1988ರ ಕಲಂ 19(1)(ಬಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಶ್ರೀ ಶಿವಣ್ಣ, ಸಹಾಯಕ ಅಧೀಕ್ಷಕರು, ಜಿಲ್ಲಾ ಕಾರಾಗೃಹ ಶಿವಮೊಗ್ಗ (ಹಾಲಿ ತುಮಕೂರು ಜಿಲ್ಲಾ ಕಾರಾಗೃಹದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ) ಇವರ ವಿರುದ್ಧ ಲಂಚ ನಿರೋಧ ಕಾಯ್ದೆ, 1988ರ ಕಲಂ 7, 13(1)(ಡಿ) ಸಹವಾಚ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಮಂಜೂರಾತಿಯನ್ನು ನೀಡಲಾಗಿದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿರ್ವಹಣೆ ನಿಯಮಾವಳಿ 1977ರ ನಿಯಮ 19(1)ರನ್ವಯ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿ ಅಡಿಯಲ್ಲಿ ದಿನಾಂಕ : 10–02–2011 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 480 ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** 2007–08ನೇ ಸಾಲಿನಲ್ಲಿ ಕಬ್ಬು ಬೆಳೆದ ರೈತರಿಗೆ ಹಾಗೂ ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು– 2008–09ನೇ ಸಾಲಿನಲ್ಲಿ ಸಕ್ಕರೆ ಕಾರ್ಖಾನೆಗಳು ಸರ್ಕಾರಕ್ಕೆ ಪಾವತಿಸಬೇಕಾದ ಕಬ್ಬು ಖರೀದಿ ತೆರಿಗೆಯನ್ನು ಬಡ್ಡಿ ರಹಿತ ಸಾಲವನ್ನಾಗಿ ಪರಿವರ್ತಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸಿಐ 19 ಎಸ್‌ಜಿಎಫ್ 2008 (ಭಾ–2), ದಿನಾಂಕ : 12–03–2008.
2. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರುರವರ ಟಿಪ್ಪಣಿ ದಿನಾಂಕ : 04–08–2008.
3. ಸರ್ಕಾರದ ಆದೇಶ ಸಂಖ್ಯೆ : ಸಿಐ 151 ಎಸ್‌ಜಿಎಫ್ 2008, (ಭಾ–1) ದಿನಾಂಕ : 30–03–2010.
4. ವಾಣಿಜ್ಯ ತೆರಿಗೆ, ವಾಣಿಜ್ಯ ತೆರಿಗೆ ಅಪರ ಆಯುಕ್ತರು, (ಜಾಗೃತ) ಬೆಂಗಳೂರು ರವರ ಪರಿಷ್ಕೃತ ಪತ್ರ ಸಂಖ್ಯೆ : ಆರ್‌ಎಫ್‌ಡಿ/ಸಿಆರ್15/09–10 ದಿನಾಂಕ : 08–11–2010.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿರುವ ಸರ್ಕಾರದ ಆದೇಶದಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳು 2007–08ನೇ ಸಾಲಿನ ಹಂಗಾಮಿಗೆ ಸಂಬಂಧಿಸಿದಂತೆ ದಿನಾಂಕ : 31–03–2007ರ ಅಂತ್ಯಕ್ಕೆ 12 ತಿಂಗಳು ಮೀರಿ ಪಕ್ವವಾದ ಎಲ್ಲಾ ಕಬ್ಬನ್ನು ಕಾರ್ಖಾನೆಗಳು ನುರಿಸಬೇಕೆಂದು ಆದೇಶಿಸುತ್ತಾ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಈ ಕೆಳಕಂಡ ಸಹಾಯಧನ ಸೌಲಭ್ಯವನ್ನು ರಾಜ್ಯ ಸರ್ಕಾರವು ನೀಡಿದೆ.

1. 2006–07ನೇ ಸಾಲಿನಲ್ಲಿ ವಿಸ್ತರಿಸಿದ ಅವಧಿಯ ನಂತರವು ಅಂದರೆ 01-06-2007ರಿಂದ 31-07-2007ರ ನಡುವಿನ ಅವಧಿಯಲ್ಲಿ ನುರಿಸಿದ ಕಬ್ಬಿಗೆ ರೂ. 8.75 ಕೋಟಿಗಳ ಸಹಾಯಧನ.
2. ದಿನಾಂಕ : 01–04–2008ರಿಂದ ದಿನಾಂಕ : 31–07–2008ರವರೆಗೆ ವಿಸ್ತರಿಸಿದ ಅವಧಿಯಲ್ಲಿ ಕಾರ್ಖಾನೆಗಳಲ್ಲಿ ನುರಿಸಲಾದ ಕಬ್ಬಿಗೆ ಪ್ರತಿ ಮೆಟ್ರಿಕ್ ಟನ್‌ಗೆ ರೂ. 100/–ರಂತೆ ಸಹಾಯಧನ.
3. 30 ಕಿ.ಮೀ. ಮೀರಿದ ದೂರದಿಂದ ಸಾಗಾಣಿಕೆ ಮಾಡಿದ ಕಬ್ಬಿಗೆ ಪ್ರತಿ ಟನ್‌ಗೆ/ಪ್ರತಿ ಕಿ.ಮೀ.ಗೆ ರೂ. 2/–ರಂತೆ ಸಾಗಾಣಿಕೆ ಸಹಾಯಧನ, ಈ ಸಾಗಾಣಿಕೆ ಸಹಾಯಧನ ಆದೇಶದ ದಿನಾಂಕದಿಂದ ಅನ್ವಯವಾಗಲಿದೆ.
4. ರಾಜ್ಯದ ಸಕ್ಕರೆ ಕಾರ್ಖಾನೆಗಳು ರಫ್ತು ಮಾಡಲಾದ ಸಕ್ಕರೆಗೆ ಪ್ರತಿ ಕ್ವಿಂಟಾಲ್‌ಗೆ ರೂ. 100/–ರಂತೆ ರಫ್ತು ಸಹಾಯಧನ. ಈ ಸಹಾಯಧನವು ಆದೇಶದ ದಿನಾಂಕದಿಂದ ಕೇಂದ್ರ ಸರ್ಕಾರವು ರಫ್ತು ಸಹಾಯಧನ ನೀಡುವ ಅವಧಿಯ ದಿನಾಂಕದವರೆಗೆ ಮಾತ್ರ ಜಾರಿಯಲ್ಲಿರುತ್ತದೆ. ಈ ಸಹಾಯಧನವನ್ನು ರೂ. 10.00 ಕೋಟಿಗಳಿಗೆ ಸೀಮಿತಗೊಳಿಸಲಾಗಿದೆ.
5. ದಿನಾಂಕ : 01–04–2008 ರಿಂದ 31–07–2008 ರವರೆಗೆ ಕಾರ್ಖಾನೆಗಳು ಪಾವತಿಸಬೇಕಾದ ಕಬ್ಬು ಖರೀದಿ ತೆರಿಗೆಯನ್ನು ಮನ್ನಾ ಮಾಡಲಾಗಿದೆ.
6. ಮೊಲಾಸಸ್ ಸಾಗಾಣಿಕೆಗೆ ವಿಧಿಸಲಾಗಿದ್ದ ನಿಯಂತ್ರಣವನ್ನು ಸಡಿಲಗೊಳಿಸಲಾಗಿದೆ.

ಮೇಲೆ ಓದಲಾದ (1)ರಲ್ಲಿರುವ ದಿನಾಂಕ : 12–03–2008ರ ಆದೇಶದಲ್ಲಿ ಹಲವಾರು ಸಹಾಯಧನ, ಸೌಲಭ್ಯ/ರಿಯಾಯಿತಿಗಳನ್ನು ನೀಡಲಾಗುವುದೆಂದು ತಿಳಿಸಿದ್ದಾಗ್ಯೂ ರಾಜ್ಯದ ಸಕ್ಕರೆ ಕಾರ್ಖಾನೆಗಳು ರೈತರ ಕಬ್ಬಿಗೆ ಸೂಕ್ತ ಬೆಲೆ ನೀಡುವುದಕ್ಕೆ ಮುಂದೆ ಬಂದಿರುವುದಿಲ್ಲ. ಈ ಹಿನ್ನೆಲೆಯಲ್ಲಿ ದಿನಾಂಕ : 14–07–2008ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ರೈತ ಮುಖಂಡರು ಹಾಗೂ ಸಕ್ಕರೆ ಕಾರ್ಖಾನೆಗಳ ಮಾಲೀಕರೊಂದಿಗೆ ಸಭೆ ನಡೆದಿದ್ದು ಸದರಿ ಸಭೆಯಲ್ಲಿ ಸಕ್ಕರೆ ಕಾರ್ಖಾನೆಗಳು ರೈತರ ಕಬ್ಬಿಗೆ ಪ್ರತಿ ಟನ್‌ಗೆ ಎಸ್‌ಎಂಪಿ ಮೇಲೆ ಹೆಚ್ಚುವರಿ ರೂ. 160/–ಗಳನ್ನು ನೀಡಲು ಹಲವಾರು ತೊಂದರೆಗಳಿರುವುದನ್ನು ವಿವರಿಸಿ ಹೆಚ್ಚುವರಿ ಪಾವತಿಸಲು ತಿಳಿಸಿರುವ ರೂ. 160/–ಗಳಲ್ಲಿ ರೂ. 100/–ಗಳನ್ನು ದಿನಾಂಕ : 31–12–2008ರೊಳಗೆ ಪಾವತಿಸುವುದಾಗಿ ಉಳಿಕೆ ರೂ. 60/–ಗಳನ್ನು ಪಾವತಿಸಲು ಬರುವ ಹಂಗಾಮಿನಲ್ಲಿ ಅಂದರೆ 2008–09ನೇ ಸಾಲಿನಲ್ಲಿ ಸರ್ಕಾರವು ಕಬ್ಬು ಖರೀದಿ ತೆರಿಗೆ ಪಾವತಿಗೆ ವಿನಾಯಿತಿ ನೀಡುವಂತೆ ಕೋರಿರುತ್ತವೆ.

ಮೇಲೆ ಓದಲಾದ (2)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿರವರ ಟಿಪ್ಪಣಿಯಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳು ಎಸ್‌ಎಂಪಿ ಮೇಲೆ ಹೆಚ್ಚುವರಿಯಾಗಿ ಪ್ರತಿ ಟನ್ ಕಬ್ಬಿಗೆ ರೂ. 160/–ಗಳನ್ನು ಪಾವತಿಸುವ ಬಗ್ಗೆ ತಿಳಿಸುತ್ತಾ ಇದರಲ್ಲಿ ರೂ. 100/–ಗಳನ್ನು ಈಗಾಗಲೇ ಸರ್ಕಾರ ದಿನಾಂಕ : 12–03–2008ರ ಆದೇಶದಲ್ಲಿ ನೀಡಿರುವ ರಿಯಾಯಿತಿಗಳನ್ನು ಉಪಯೋಗಿಸಿಕೊಂಡು ಪಾವತಿಸಬಹುದಾಗಿದ್ದು, ಬಾಕಿ ಉಳಿದ ರೂ. 60/–ಗಳ ಬಗ್ಗೆ ಮುಂದಿನ ಸಾಲಿನ ಕಬ್ಬು ಖರೀದಿ ತೆರಿಗೆಯನ್ನು ಹೊಂದಾಣಿಕೆ ಮಾಡಿಕೊಳ್ಳಲು ಅಥವಾ ಬಡ್ಡಿ ರಹಿತ ಸಾಲ ಮಂಜೂರು ಮಾಡುವ ಬಗ್ಗೆ ಸರ್ಕಾರದ ಹಂತದಲ್ಲಿ ಕ್ರಮ ತೆಗೆದುಕೊಳ್ಳಲು ಕೋರಿರುತ್ತಾರೆ.

2007–08ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ನಿಗದಿಪಡಿಸಿದ ಶಾಸನಬದ್ಧ ಕನಿಷ್ಠ ದರದ ಮೇಲೆ ಹೆಚ್ಚುವರಿಯಾಗಿ ಪ್ರತಿ ಟನ್ ಕಬ್ಬಿಗೆ ರೂ. 160/–ಗಳನ್ನು ಈ ಕೆಳಕಂಡ 8 ಸಕ್ಕರೆ ಕಾರ್ಖಾನೆಗಳು ಪಾವತಿ ಮಾಡಿದ್ದು, ಕಾರ್ಖಾನೆಗಳು ಕಬ್ಬು ಸರಬರಾಜು ಮಾಡಿದ ರೈತರಿಗೆ ಹಣ ಪಾವತಿಸಲು ಅನುಕೂಲವಾಗುವ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಕಂಡ ಕಾರ್ಖಾನೆಗಳು 2008–09ನೇ ಸಾಲಿನಲ್ಲಿ (01–08–2008 ರಿಂದ 31–03–2009 ರವರೆಗೆ) ಮತ್ತು 01–04–2009ರ ನಂತರ ಏಪ್ರಿಲ್ 09ರ ಮಾಹೆಯಲ್ಲಿ ನುರಿಸಿದ ಕಬ್ಬಿಗೆ ಸರ್ಕಾರಕ್ಕೆ ಪಾವತಿಸಬೇಕಾದ ಕಬ್ಬು ಖರೀದಿ ತೆರಿಗೆಯನ್ನು ಬಡ್ಡಿ ರಹಿತ ಸಾಲವನ್ನಾಗಿ ಪರಿವರ್ತಿಸಲು ಉದ್ದೇಶಿಸಿ ಮೇಲೆ ಓದಲಾದ (4)ರಲ್ಲಿ ಈ ಸಂಬಂಧ ವಾಣಿಜ್ಯ ತೆರಿಗೆ ಇಲಾಖೆಯಿಂದ ರೂ. 12,39,85,534/–ಗಳಿಗೆ ಪ್ರಸ್ತಾವನೆ ಬಂದಿದ್ದು, ವಿವರ ಕೆಳಕಂಡಂತಿರುತ್ತದೆ.

(ರೂ.ಗಳಲ್ಲಿ)

| ಸಕ್ಕರೆ ಕಾರ್ಖಾನೆಯ ಹೆಸರು | 01–08–2008 ರಿಂದ 31–03–2009 ರವರೆಗೆ ಖರೀದಿ ತೆರಿಗೆ | 01–04–2009ರ ನಂತರ ನುರಿಸಿದ ಕಬ್ಬಿನ ಖರೀದಿ ತೆರಿಗೆ ಬಾಧ್ಯತೆ |
|---|---|---|
| 1. ನಂದಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಕೃಷ್ಣಾನಗರ, ಬಿಜಾಪುರ | 2,16,59,789–00 | ಇಲ್ಲ |
| 2. ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಹಳ್ಳಿಖೇಡ್, ಬೀದರ್ | 98,66,514–00 | ಇಲ್ಲ |
| 3. ಹೇಮಾವತಿ ಸಹಕಾರಿ ಸಕ್ಕರೆ ಕಾರ್ಖಾನೆ, ಶ್ರೀನಿವಾಸಪುರ, ಹಾಸನ ಜಿಲ್ಲೆ (ಶ್ರೀ ಚಾಮುಂಡೇಶ್ವರಿ ಶುಗರ್ಸ್ ರವರು ಗುತ್ತಿಗೆ ಪಡೆದಿದ್ದಾರೆ) | 34,31,000–00 | ಇಲ್ಲ |
| 4. ಶ್ರೀ ಚಾಮುಂಡೇಶ್ವರಿ ಶುಗರ್ಸ್ ಲಿ., ಕೆ.ಎಂ.ದೊಡ್ಡಿ, ಮದ್ದೂರು | 1,33,90,163–00 | 3,78,514–00 |
| 5. ಎಸ್.ಪಿ.ಆರ್. ಶುಗರ್ಸ್ ಪ್ರೈ ಲಿ., ಕಂಚಗಾರನಹಳ್ಳಿ, ರಾಮನಗರ ಜಿಲ್ಲೆ | 12,89,767–00 | ಇಲ್ಲ |
| 6. ಬನ್ನಾರಿ ಅಮ್ಮನ್ ಶುಗರ್ಸ್ ಲಿ., ಅಲಗಂಚಿ, ಮೈಸೂರು ಜಿಲ್ಲೆ | 5,42,20,559–00 | 12,20,960–00 |
| 7. ನಿರಾಣಿ ಶುಗರ್ಸ್ ಲಿ., ಮುಧೋಳ, ಬಾಗಲಕೋಟೆ ಜಿಲ್ಲೆ | 1,43,05,000–00 | 1,42,000–00 |
| 8. ಶಿರಗುಪ್ಪ ಶುಗರ್ಸ್ ಮತ್ತು ಕೆಮಿಕಲ್ಸ್ ಲಿ., ದೇಶನೂರು, ಬಳ್ಳಾರಿ ಜಿಲ್ಲೆ | 40,81,268–00 | ಇಲ್ಲ |
| ಒಟ್ಟು | 12,22,44,060–00 | 17,41,474–00 |
| **ಒಟ್ಟು** | **12,39,85,534–00** | |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 151 ಎಸ್‌ಜಿಎಫ್ 2008(ಭಾ-1) ಬೆಂಗಳೂರು, ದಿನಾಂಕ: 14-02-2011.**

2007-08ನೇ ಸಾಲಿನಲ್ಲಿ ಸಕ್ಕರೆ ಕಾರ್ಖಾನೆಗಳಿಗೆ ಕಬ್ಬು ಸರಬರಾಜು ಮಾಡಿದ ರೈತರಿಗೆ ಕೇಂದ್ರ ಸರ್ಕಾರ ನಿಗದಿ ಪಡಿಸಿದ ಶಾಸನಬದ್ಧ ಕನಿಷ್ಠ ದರದ ಮೇಲೆ ಪ್ರತಿ ಟನ್ ಕಬ್ಬಿಗೆ ಹೆಚ್ಚುವರಿ ರೂ. 160/-ಗಳನ್ನು ಪ್ರಸ್ತಾವನೆಯಲ್ಲಿ ಕಾಣಿಸಿರುವ 8 ಸಕ್ಕರೆ ಕಾರ್ಖಾನೆಗಳು ಪಾವತಿಸಿದ್ದು, ಈ ಕೆಳಕಂಡ 8 ಸಕ್ಕರೆ ಕಾರ್ಖಾನೆಗಳಿಗೆ ಮಾತ್ರ 2008-09ನೇ ಸಾಲಿನಲ್ಲಿ ಈ ಕಾರ್ಖಾನೆಗಳು ಸರ್ಕಾರಕ್ಕೆ ಪಾವತಿಸಬೇಕಾದ ರೂ. 12,39,85,534/-ಗಳ ಕಬ್ಬು ಖರೀದಿ ತೆರಿಗೆಯನ್ನು ಬಡ್ಡಿ ರಹಿತ ಸಾಲವನ್ನಾಗಿ ಪರಿವರ್ತಿಸಲಾಗಿದ್ದು, ಬಡ್ಡಿ ರಹಿತ ಸಾಲವನ್ನಾಗಿ ಪರಿವರ್ತಿಸಲಾದ ಕಬ್ಬು ಖರೀದಿ ತೆರಿಗೆಯನ್ನು ಈ ಕಾರ್ಖಾನೆಗಳು ಮುಂದಿನ 3 ವರ್ಷಗಳ ಅವಧಿಯಲ್ಲಿ ಸರ್ಕಾರಕ್ಕೆ ಮರುಪಾವತಿ ಮಾಡಬೇಕೆಂದು ನಿರ್ಧರಿಸಿ ಹಾಗು ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಬಡ್ಡಿ ರಹಿತ ಸಾಲವನ್ನಾಗಿ ಪರಿವರ್ತಿಸಲಾಗಿದೆ.

(ರೂ.ಗಳಲ್ಲಿ)

| ಸಕ್ಕರೆ ಕಾರ್ಖಾನೆಯ ಹೆಸರು | 01-08-2008 ರಿಂದ 31-03-2009 ರವರೆಗೆ ಖರೀದಿ ತೆರಿಗೆ | 01-04-2009ರ ನಂತರ ನುರಿಸಿದ ಕಬ್ಬಿನ ಖರೀದಿ ತೆರಿಗೆ ಬಾಧ್ಯತೆ |
|---|---|---|
| 1. ನಂದಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಕೃಷ್ಣಾನಗರ, ಬಿಜಾಪುರ | 2,16,59,789-00 | ಇಲ್ಲ |
| 2. ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಹಳ್ಳಿಖೇಡ್, ಬೀದರ್ | 98,66,514-00 | ಇಲ್ಲ |
| 3. ಹೇಮಾವತಿ ಸಹಕಾರಿ ಸಕ್ಕರೆ ಕಾರ್ಖಾನೆ, ಶ್ರೀನಿವಾಸಪುರ, ಹಾಸನ ಜಿಲ್ಲೆ (ಶ್ರೀ ಚಾಮುಂಡೇಶ್ವರಿ ಶುಗರ್ಸ್ ರವರು ಗುತ್ತಿಗೆ ಪಡೆದಿದ್ದಾರೆ) | 34,31,000-00 | ಇಲ್ಲ |
| 4. ಶ್ರೀ ಚಾಮುಂಡೇಶ್ವರಿ ಶುಗರ್ಸ್ ಲಿ., ಕೆ.ಎಂ.ದೊಡ್ಡಿ, ಮದ್ದೂರು | 1,33,90,163-00 | 3,78,514-00 |
| 5. ಎಸ್.ಪಿ.ಆರ್. ಶುಗರ್ಸ್ ಪ್ರೈ ಲಿ., ಕಂಚಗಾರನಹಳ್ಳಿ, ರಾಮನಗರ ಜಿಲ್ಲೆ | 12,89,767-00 | ಇಲ್ಲ |
| 6. ಬನ್ನಾರಿ ಅಮ್ಮನ್ ಶುಗರ್ಸ್ ಲಿ., ಅಲಗಂಚಿ, ಮೈಸೂರು ಜಿಲ್ಲೆ | 5,42,20,559-00 | 12,20,960-00 |
| 7. ನಿರಾಣಿ ಶುಗರ್ಸ್ ಲಿ., ಮುಧೋಳ, ಬಾಗಲಕೋಟೆ ಜಿಲ್ಲೆ | 1,43,05,000-00 | 1,42,000-00 |
| 8. ಶಿರಗುಪ್ಪ ಶುಗರ್ಸ್ ಮತ್ತು ಕೆಮಿಕಲ್ಸ್ ಲಿ., ದೇಶನೂರು, ಬಳ್ಳಾರಿ ಜಿಲ್ಲೆ | 40,81,268-00 | ಇಲ್ಲ |
| ಒಟ್ಟು | 12,22,44,060-00 | 17,41,474-00 |
| **ಒಟ್ಟು ಮೊತ್ತ** | **12,39,85,534-00** | |

2010-11ನೇ ಸಾಲಿನ ಪೂರಕ ಅಂದಾಜುಗಳು (ಎರಡನೆಯ ಕಂತು)ನಲ್ಲಿ ಈ ಹಣವನ್ನು ಒದಗಿಸಲಾಗಿದ್ದು, ಪುಸ್ತಕ ಹೊಂದಾಣಿಕೆ ಮೊತ್ತ ರೂ. 12,39,85,534/-ಗಳನ್ನು ಲೆಕ್ಕ ಶೀರ್ಷಿಕೆ 6860-04-190-1-16-394 (Plan) Conversion of Purchase Tax into interest free loanಗೆ ವೆಚ್ಚ ಹಾಕಿ ಲೆಕ್ಕ ಶೀರ್ಷಿಕೆ 0040-00-102-0-01 Sales Taxಗೆ ಜಮೆ ತೋರಿಸಿ 2010-11ನೇ ಸಾಲಿನ ಲೆಕ್ಕಗಳಲ್ಲಿ ಮಹಾಲೇಖಪಾಲರು (ಹಕ್ಕು ಮತ್ತು ರಹದಾರಿ) ರವರು ಲೆಕ್ಕ ಹೊಂದಾಣಿಕೆಯನ್ನು ಮಾಡುವರು.

**ಷರತ್ತುಗಳು :**

1. ಪರಿವರ್ತಿಸಲಾದ ಬಡ್ಡಿ ರಹಿತ ಸಾಲವು ಕಬ್ಬು ಖರೀದಿ ತೆರಿಗೆ ಮೊತ್ತಕ್ಕೆ ಮಾತ್ರ ಸೀಮಿತವಾಗಿದ್ದು, ಇದರಲ್ಲಿ ರಸ್ತೆ ಕರವನ್ನು ಒಳಗೊಂಡಿರುವುದಿಲ್ಲ.
2. 2008-09ನೇ ಸಾಲಿನ ಕಬ್ಬು ನುರಿಸುವ ಹಂಗಾಮಿನಲ್ಲಿ ಕಾರ್ಖಾನೆಗಳು ಖರೀದಿಸಿದ ಕಬ್ಬಿಗೆ ಕಬ್ಬು ಖರೀದಿ ತೆರಿಗೆ ಬಾಬ್ತು ಮೊತ್ತವನ್ನು ಸಾಲವಾಗಿ ಪರಿವರ್ತಿಸುವ ಆಧಾರದ ಮೇಲೆ ನಿಗದಿಪಡಿಸಿದೆ. 2008-09 ಅಥವಾ 2007-08ನೇ ಸಾಲಿಗೆ ಸಂಬಂಧಿಸಿದಂತೆ ಇದರಲ್ಲಿ ಯಾವುದು ಕಡಿಮೆಯೋ ಅದನ್ನು ಪರಿಗಣಿಸುವುದು.
3. 2008-09ನೇ ಸಾಲಿನ ಕಬ್ಬು ನುರಿಸುವ ಹಂಗಾಮು 30-06-09ರವರೆಗೆ ಇದ್ದು, 2008-09ನೇ ಸಾಲಿನ ಅವಧಿಯನ್ನು ದಿನಾಂಕ : 30-06-09 ರವರೆಗೆ ನುರಿಸುವ ಹಂಗಾಮಿಗೆ ಪರಿವರ್ತಿಸಲಾದ ಸಾಲದ ಅವಧಿ ಎಂದು ಪರಿಗಣಿಸಲಾಗಿದೆ.
4. ಪರಿವರ್ತಿಸಲಾದ ಕಬ್ಬು ಖರೀದಿ ತೆರಿಗೆಯನ್ನು ಕಾರ್ಖಾನೆಗಳು 2009-10ನೇ ಸಾಲಿನಿಂದ 3 ಸಮಾನ ಕಂತುಗಳಲ್ಲಿ ಅಂದರೆ ಮೊದಲನೇ ಕಂತನ್ನು 31-03-2011ರೊಳಗೆ, 2ನೇ ಕಂತನ್ನು 30-09-2011ರೊಳಗೆ ಮತ್ತು 3ನೇಯ ಹಾಗೂ ಕೊನೆಯ ಕಂತನ್ನು 30-09-2012ರೊಳಗೆ ಮರುಪಾವತಿಸುವುದು.
5. 2008-09ನೇ ಸಾಲಿನಲ್ಲಿ ಕಬ್ಬು ಖರೀದಿ ತೆರಿಗೆ ಜೊತೆಗೆ ರಸ್ತೆ ಕರ ಪಾವತಿಸುವುದು ಬಾಕಿ ಉಳಿದಿದ್ದಲ್ಲಿ ಬಾಕಿ ಉಳಿದಿರುವ ರಸ್ತೆ ಕರವನ್ನು ಕೂಡಲೇ ಪಾವತಿಸುವುದು.
6. 2009-10ನೇ ಸಾಲಿನಿಂದ 3 ಸಮಾನ ಕಂತುಗಳಲ್ಲಿ ಮರುಪಾವತಿ ಮಾಡಲಾಗದ ಕಾರ್ಖಾನೆಗಳಿಗೆ ನಿಯಮಾನುಸಾರ ದಂಡ ಬಡ್ಡಿಯನ್ನು ವಿಧಿಸಿ ಭೂಕಂದಾಯ ಬಾಕಿಯಂತೆ ವಸೂಲಾತಿಗೆ ಕ್ರಮ ವಹಿಸಲಾಗುವುದು.

7. 2008-09ನೇ ಸಾಲಿಗೆ ಬಡ್ಡಿ ರಹಿತ ಸಾಲ ಸೌಲಭ್ಯ ಪಡೆದ ಕಾರ್ಖಾನೆಗಳಿಂದ ಸಾಲದ ಮೊತ್ತವನ್ನು ಮರುಪಾವತಿ ಮಾಡಿಕೊಳ್ಳುವ ಕ್ರಮವನ್ನು ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಮತ್ತು ವಾಣಿಜ್ಯ ತೆರಿಗೆ ಆಯುಕ್ತರು ಪ್ರತ್ಯೇಕ ಖಾತೆಗಳನ್ನು ತೆರೆದು ನಿರ್ವಹಿಸುವುದು.
8. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರು ಕಬ್ಬು ಖರೀದಿ ತೆರಿಗೆಯನ್ನು ಬಡ್ಡಿ ರಹಿತ ಸಾಲವನ್ನಾಗಿ ಪರಿವರ್ತಿಸಲಾಗಿರುವ ಮೊತ್ತಕ್ಕೆ ಕಾರ್ಖಾನೆಗಳಿಂದ ಒಪ್ಪಂದ ಪತ್ರಗಳನ್ನು ಪಡೆದುಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 1696 ವೆಚ್ಚ 1/2010 ದಿನಾಂಕ : 06-12-2010ರಲ್ಲಿ ಮತ್ತು ಎಫ್‌ಡಿ 2091 ವೆಚ್ಚ 1/2010 ದಿನಾಂಕ : 27-12-2010 ಮತ್ತು ಅನಧಿಕೃತ ಟಿಪ್ಪಣಿ ಸಂಖ್ಯೆ : ಎಫ್‌ಡಿ 2091 ವೆಚ್ಚ 1/2010 ದಿನಾಂಕ 04-02-2011ರಲ್ಲಿ ನೀಡಲಾದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ.ಆನಂದ್‌ಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 481

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತದ ಯೋಜನಾ ಅನುಷ್ಠಾನದಲ್ಲಿ ಉಂಟಾಗಿರುವ ಹೆಚ್ಚಳವನ್ನು ಭರಿಸಲು ಆರ್ಥಿಕ ನೆರವು ಒದಗಿಸುವ ಬಗ್ಗೆ.

**ಓದಲಾಗಿದೆ :** ದಿನಾಂಕ : 21-1-2011ರ ವಾಕೈ 18 ಸಸಕಾ 2009ನೇ ಸಂಖ್ಯೆಯ ಸರ್ಕಾರದ ಆದೇಶ.

**ಪ್ರಸ್ತಾವನೆ:**

ಬೆಳಗಾಂ ಜಿಲ್ಲೆಯ ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತದ ಯೋಜನಾ ಅನುಷ್ಠಾನದಲ್ಲಿ ಉಂಟಾಗಿರುವ ಹೆಚ್ಚಳವನ್ನು ಭರಿಸುವ ಹಾಗೂ ಕಾರ್ಖಾನೆಯನ್ನು ಪೂರ್ಣಗೊಳಿಸುವ ಸಲುವಾಗಿ ರೂ. 22.43 ಕೋಟಿಗಳ ಎನ್.ಸಿ.ಡಿ.ಸಿ. ಸಾಲದ ಮಂಜೂರಾತಿಗೆ ದಿನಾಂಕ : 21-01-2011ರ ಆದೇಶದ ಮೂಲಕ ಸರ್ಕಾರದ ಅನುಮೋದನೆಯನ್ನು ನೀಡಲಾಗಿರುತ್ತದೆ. ಮುಂದುವರೆದು ಈ ಸಾಲದ ಮೊದಲನೇ ಕಂತಾಗಿ ರೂ. 7.48 ಕೋಟಿಗಳನ್ನು ಸಹ ಈ ಆದೇಶದ ಮೂಲಕ ಕಾರ್ಖಾನೆಗೆ ಬಿಡುಗಡೆ ಮಾಡಲಾಗಿರುತ್ತದೆ.

ದಿನಾಂಕ : 21-1-2011ರ ಆದೇಶದ ಮೂಲಕ ಬಿಡುಗಡೆ ಮಾಡಲಾಗಿರುವ ರೂ. 7.48 ಕೋಟಿಗಳ ಎನ್.ಸಿ.ಡಿ.ಸಿ ಸಾಲವನ್ನು ಕಾರ್ಖಾನೆಯು ಸರ್ಕಾರಕ್ಕೆ ಮರುಪಾವತಿಸುವ ಸಲುವಾಗಿ ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಲು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ವಾಕೈ 18 ಸಸಕಾ 2009, ಬೆಂಗಳೂರು, ದಿನಾಂಕ : 14-02-2011**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಬೆಳಗಾಂ ಜಿಲ್ಲೆಯ ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತಕ್ಕೆ ದಿನಾಂಕ 21-1-2011ರ ಆದೇಶದ ಮೂಲಕ ಬಿಡುಗಡೆ ಮಾಡಲಾಗಿರುವ ರೂ. 7.48 ಕೋಟಿಗಳ ಎನ್.ಸಿ.ಡಿ.ಸಿ ಸಾಲವನ್ನು ಕಾರ್ಖಾನೆಯು ಸರ್ಕಾರಕ್ಕೆ ಮರುಪಾವತಿ ಮಾಡುವ ಸಲುವಾಗಿ ಷರತ್ತು ಮತ್ತು ನಿಬಂಧನೆಗಳನ್ನು, ಈ ಆದೇಶದ ಅನುಬಂಧದ ಪ್ರಕಾರ ವಿಧಿಸಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ದಿನಾಂಕ : 09-02-2011ರ ವಾಕೈ 20 ಆಂಆಸ(1) 2011ನೇ ಸಂಖ್ಯೆಯ ಅನಧಿಕೃತ ಟಿಪ್ಪಣಿ ಮೂಲಕ ನೀಡಲಾಗಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಶ್ರೀನಿವಾಸ್**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ
(ಸಹಕಾರಿ ಸಕ್ಕರೆ)

## Annexure to the G.O. No. CI 18 SaSaKa 2009, dated 14-02-2011

Essential details of Loans sanctioned vide Government Order No. CI 18 SaSaKa 2009, dated : 21-01-2011

LOANS AND ADVANCES BY STATE GOVERNMENT

| | | |
|---|---|---|
| 1. | Sanctioning Authority | Government of Karnataka |
| 2. | Sanction (G.O. No. and date) | No. CI 18 SaSaKa 2009, dated 21-01-2011 |
| 3. | To whom sanctioned | The Markandeya Cooperative Sugar Mills Limited, Kakati, Belgaum District |
| 4. | Amount sanctioned (in words and figures) | Rs. 7.48 Crores (Rupees Seven crores and forty eight lakhs only) |
| 5. | Sanction valid upto | Not applicable |
| 6. | Purpose of Loan | Towards establishment of new cooperative sugar mills |
| 7. | Payable in cash or adjustment | Cash/Cheque |
| 8. | Plan or Non-plan | Plan |
| 9. | Head of Account to which the loan is debitable | 6860-04-101-0-25 “The Markandeya Sahakari Sakkare Karkhane-395-Loan (plan)”. |

| | | | |
|---|---|---|---|
| 10. | Progressive amount of loan sanctioned to date in the financial year | **G.O. No. and date** | **Amount (Rs. In crores)** |
| | | No. CI 18 Sasaka 2009, dated 21-1-2011 | 7.48 |
| | | Total | 7.48 |
| 11. | Period of Loan | 8 years from the date of sanction | |
| 12. | Moratorium towards repayment, if any | 2 years | |
| 13. | Date and year from which repayment is to commence | Annually from third anniversary of the deemed date of drawal of loan, IN SIX INSTALMENTS. | |
| 14. | Mode of repayment | By cheque or DD | |
| 15. | Rate of Interest<br>a) Effective (if instalment received on or before due date)<br>b) Normal rate (if instalment not received on or before due date)<br>c) Penal rate of interest (on over due instalment for the period of default)<br>d) Mode of recovery of interest | 11.5% p.a.<br>12.5% p.a.<br>15.0% p.a.<br>Annually from first anniversary of the deemed date of drawal of loan | |
| 16. | Adjustment of over due loans. If any | --- | |
| 17. | Authority who countersigns the payee's receipt | Commissioner for Cane Development and Director of Sugar, Bangalore | |
| 18. | Authority who maintains loan ledger and watches recovery | Commissioner for Cane Development and Director of Sugar, Bangalore | |
| 19. | Authority responsible for reconciliation and monitoring of loan | Commissioner for Cane Development and Director of Sugar, Bangalore | |
| 20. | Authority to whom utilization certificates are to be given | Commissioner for Cane Development and Director of Sugar, Bangalore | |
| 21. | Authority who should furnish estimate of recovery of loan and interest for inclusion in the budget estimates | Commissioner for Cane Development and Director of Sugar, Bangalore | |

**C. Sreenivas**
Under Secretary to Government
Commerce and Industries Department
(Co-operative Sugar)

ಪಿ.ಆರ್. 482

## ಕಂದಾಯ ಸಚಿವಾಲಯ

**ವಿಷಯ :** ಶಿಷ್ಟಾಚಾರ ಕಾರ್ಯ ನಿರ್ವಹಣೆಗಾಗಿ ತಹಶೀಲ್ದಾರ್ (ಗ್ರೇಡ್–2) ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂ : ಕಂಇ 28 ಎಟಿಎಸ್ 93, ದಿನಾಂಕ : 05–07–1993.
2. ಸರ್ಕಾರದ ಆದೇಶ ಸಂ : ಕಂಇ 18 ಎಎಸ್‌ಡಿ 2008, ದಿನಾಂಕ : 06–05–2008.
3. ಸರ್ಕಾರದ ಆದೇಶ ಸಂ : ಕಂಇ 591 ಎಎಸ್‌ಡಿ 2009, ದಿನಾಂಕ : 08–09–2010.
4. ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರ ಪತ್ರ ಸಂ : ಸಿಬ್ಬಂದಿ (5) : ಸಿಆರ್–78/10–11, ದಿ : 15–12–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಶಿಷ್ಟಾಚಾರ ಕಾರ್ಯ ನಿರ್ವಹಣೆಗಾಗಿ ಮೈಸೂರು, ಬೆಳಗಾಂ ಮತ್ತು ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ತಲಾ ಒಂದು ತಹಶೀಲ್ದಾರ್ ಗುಂಪು–ಬಿ ಹುದ್ದೆಯನ್ನು ಒಂದು ವರ್ಷದವರೆಗೆ ತಾತ್ಕಾಲಿಕವಾಗಿ ಸೃಜಿಸಲಾಗಿತ್ತು. ಸದರಿ ಹುದ್ದೆಯನ್ನು ಕಾಲಕಾಲಕ್ಕೆ ಅವಶ್ಯಕತೆಗನುಗುಣವಾಗಿ ಮುಂದುವರೆಸಲಾಗುತ್ತಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (2) ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ : 04–07–2005 ರಿಂದ 03–07–2009 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿತ್ತು. ಸದರಿ ಹುದ್ದೆಯನ್ನು ಪುನಃ ಮುಂದುವರೆಸುವಂತೆ ಪ್ರಾದೇಶಿಕ ಆಯುಕ್ತರು, ಮೈಸೂರು ರವರು ಕೋರಿದ್ದರಿಂದ ಮೇಲೆ ಓದಲಾದ ಕ್ರ.ಸಂ. (3) ರ ದಿನಾಂಕ : 08–09–2010 ರ ಆದೇಶದಲ್ಲಿ ದಿನಾಂಕ : 04–07–2009 ರಿಂದ 03–07–2010 ರವರೆಗೆ ಮುಂದುವರೆಸಲಾಗಿತ್ತು.

ಈ ಹುದ್ದೆಯನ್ನು ಪುನಃ ಮುಂದುವರೆಸುವಂತೆ ಮೇಲೆ ಓದಲಾದ ಕ್ರ.ಸಂ. (4) ರ ದಿನಾಂಕ : 15–12–2010 ರ ಪತ್ರದಲ್ಲಿ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು, ಇವರು ಕೋರಿದ್ದರು. ಸರ್ಕಾರವು ಈ ಅಂಶವನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 05 ಎಎಸ್‌ಡಿ 2011, ಬೆಂಗಳೂರು, ದಿನಾಂಕ: 11–02–2011.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಮೈಸೂರು ಜಿಲ್ಲಾಧಿಕಾರಿಗಳ ಕಛೇರಿಯಲ್ಲಿನ ತಹಶೀಲ್ದಾರ್ ಗ್ರೇಡ್–2 ಶಿಷ್ಟಾಚಾರ ಹುದ್ದೆಯನ್ನು ದಿನಾಂಕ : 04–07–2010 ರಿಂದ 03–07–2012 ವರೆಗೆ ತಾತ್ಕಾಲಿಕವಾಗಿ ಮುಂದುವರಿಸಲು ಸರ್ಕಾರ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ : ಎಫ್‌ಡಿ 1 ಟಿಎಫ್‌ಸಿ 96, ದಿನಾಂಕ : 10–07–1996 ರಲ್ಲಿ ಪ್ರದತ್ತವಾದ ಅಧಿಕಾರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 488

## INFORMATION TECHNOLOGY BIO TECHNOLOGY AND SCIENCE & TECHNOLOGY SECRETARIAT

**Sub :** Information and Communications Technology Policy-2011.

**Preamble:**

Karnataka introduced its first IT Policy in the year 1997 followed by the "Millennium IT Policy" in the year 2000. The Millennium IT Policy, in force since 2000, was instrumental in the growth of IT, particularly, in Bangalore, so much so that Bangalore earned the nickname "IT Capital of India". All the objectives of the "Millennium IT Policy" have been achieved. Electronics City and Whitefield in Bangalore have emerged as IT hubs. BATF has become role model for other cities. Bangalore has emerged as the most favored destination for high-end technology business and R & D. It is the 4$^{th}$ best Technology hub in the world.

Though secondary cities are emerging as alternative IT destinations, they have not picked up as much as Bangalore has done. Keeping in view the need to push IT growth to not only in Tier-II and Tier-III cities but also in the semi urban/rural areas, it is felt necessary to revise the IT policy. The new policy focuses on pushing IT growth in secondary cities as well as incentivizing setting up of BPO/ITes in rural areas, Bangalore would be positioned as high-end IT destination focusing on R & D and product innovation. The revised Policy also covers telecom and therefore has been named as Information and Communications Technology Policy. The Information Technology Policy of 2000 shall stand replaced by the Information and Communications Technology Policy Hence the order.

**Government Order No. ITD 11 PRM 2008, Bangalore, Dated 02-02- 2011**

In the circumstances explained in the preamble, Government are pleased to announce the Information and Communications Technology Policy-2011 for Karnataka State, as annexed to this Government Order.

The Karnataka Information and Communications Technology Policy – 2011, shall come into force with immediate effect and shall remain in force for a period of 5 years or till the issue of a revised Information and Communications Technology Policy.

This order issues with the concurrence of finance department vide their Note No. FD 303 EXP.2/2010 dated : 27-09-2010 and Planning Department Concurrence Vide their U.O. Note No. PD 04 FRO 2009 Dated : 03-03-2009.

By Order and in the name of the Governor of Karnataka,
**Ashok kumar C. Manoli**
Principal Secretary to Government,
Department of Information Technology,
Bio Technology and Science & Technology

PR. 489

## ಕಂದಾಯ ಸಚಿವಾಲಯ

**ವಿಷಯ :** 2006 ನೇ ತಂಡದ ತಹಶೀಲ್ದಾರರುಗಳ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಅಧಿಸೂಚನೆ ಸಂ : ಕಂಇ 51 ಎಎಸ್‌ಡಿ 2008, ದಿನಾಂಕ : 23–05–2008.
2. ಸರ್ಕಾರದ ಅಧಿಕೃತ ಜ್ಞಾಪನ ಸಂ : ಆರ್‌ಡಿ 223 ಎಎಸ್‌ಡಿ 2008, ದಿನಾಂಕ : 11–06–2008.
3. ಸರ್ಕಾರದ ಪತ್ರ ಸಂ : ಕಂಇ 462 ಎಎಸ್‌ಡಿ 2010, ದಿನಾಂಕ : 09–08–2010.
4. ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ, ದಕ್ಷಿಣ ಕನ್ನಡ, ಹಾವೇರಿ ತುಮಕೂರು, ಮೈಸೂರು, ದಾವಣಗೆರೆ, ಬೆಂಗಳೂರು ನಗರ ಮತ್ತು ಧಾರವಾಡ ಜಿಲ್ಲೆ ಇವರ ಪತ್ರಗಳು ದಿನಾಂಕ ಅನುಕ್ರಮವಾಗಿ 02–12–10, 11–10–10, 19–10–10, 02–09–10, 04–09–10, 30–08–10, 20–12–10 ಮತ್ತು 04–12–10.
5. ಸರ್ಕಾರದ ಆದೇಶ ಸಂ : ಆರ್‌ಡಿ 462 ಎಎಸ್‌ಡಿ 2010 ದಿನಾಂಕ : 21–01–2011.
6. ಶ್ರೀಮತಿ ಸೌಜನ್ಯ ಭರಣಿ ಮತ್ತು ಶ್ರೀಮತಿ ಕವಿತಾ ಯೋಗಪ್ಪನವರ್ ಇವರ ಮನವಿ ದಿನಾಂಕ : 25–01–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ. ಸಂ. (1) ದಿನಾಂಕ : 23–05–2008 ರ ಸರ್ಕಾರಿ ಅಧಿಸೂಚನೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997 ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡ ಒಟ್ಟು 40 ಅಭ್ಯರ್ಥಿಗಳಿಗೆ ಪರಿವೀಕ್ಷಣಾ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿ ಆದೇಶ ನೀಡಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಒಟ್ಟು 40 ಪರಿವೀಕ್ಷಣಾ ತಹಶೀಲ್ದಾರರುಗಳನ್ನು 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯ ಮೇಲೆ ಇರುತ್ತಾರೆಂದು ಮತ್ತು ಈ ಅವಧಿಯಲ್ಲಿ ಕನ್ನಡ ಭಾಷಾ ಪರೀಕ್ಷೆ ಮತ್ತು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂದು ತಿಳಿಸಲಾಗಿತ್ತು. ನೇಮಕಗೊಂಡ ಎಲ್ಲಾ 40 ಪರಿವೀಕ್ಷಣಾ ತಹಶೀಲ್ದಾರರುಗಳು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ ಕ್ರ. ಸಂ. (2) ದಿನಾಂಕ : 11-06-2008 ರಲ್ಲಿ ಎಲ್ಲಾ ಪರಿವೀಕ್ಷಣಾ ತಹಶೀಲ್ದಾರರುಗಳಿಗೆ ಎರಡು ವರ್ಷಗಳ ತರಬೇತಿಗಾಗಿ ವಿವಿಧ ಜಿಲ್ಲೆಗಳಿಗೆ ತೈನಾತಿಸಲಾಗಿತ್ತು. ಆದರೆ, ಇವರುಗಳಲ್ಲಿ ವಿವಿಧ ಕಾರಣಗಳಿಂದ/ಬೇರೆ ಹುದ್ದೆಗೆ ನೇಮಕಗೊಂಡಿದ್ದರಿಂದ ಒಟ್ಟು 5 ಪರಿವೀಕ್ಷಣಾ ತಹಶೀಲ್ದಾರರುಗಳು (ಶ್ರೀ ಶಂಭುಲಿಂಗಪ್ಪ, ಶ್ರೀ ಅಭ್ಯುದಯ ಎ. ಆನಂದ್, ಶ್ರೀ ಎಂ. ಜೆ. ಚೇತನ, ಶ್ರೀ ಪ್ರಸನ್ನಕುಮಾರ್ ಬಿ. ಕೆ. ಮತ್ತು ಶ್ರೀ ಇಸ್ಲಾವುದ್ದೀನ್) ಸೇವೆಯಿಂದ ಬಿಟ್ಟುಹೋಗಿರುತ್ತಾರೆ. ಇನ್ನಳಿದ 35 ಪರಿವೀಕ್ಷಣಾ ತಹಶೀಲ್ದಾರರುಗಳ ನಿಗದಿತ ಇಲಾಖಾ ಪರೀಕ್ಷೆಗಳನ್ನು ಉತ್ತೀರ್ಣರಾಗಿರುವ ಬಗ್ಗೆ, ಜಿಲ್ಲಾ ತರಬೇತಿಯಲ್ಲಿದ್ದಾಗ, ತರಬೇತಿಯನ್ನು ತೃಪ್ತಿಕರವಾಗಿ ಪೂರೈಸಿರುವ ಬಗ್ಗೆ ಹಾಗೂ ಇವರುಗಳ ವಿರುದ್ಧ ಇಲಾಖಾ ವಿಚಾರಣೆಗಳ ಬಗ್ಗೆ ಮಾಹಿತಿಯನ್ನು ಮೇಲೆ ಓದಲಾದ ಕ್ರ. ಸಂ. (3) ರ ದಿನಾಂಕ : 09-08-2010 ರಲ್ಲಿ ಎಲ್ಲಾ ಜಿಲ್ಲಾಧಿಕಾರಿಗಳಿಂದ ಪಡೆಯಲು ಪತ್ರ ಬರೆಯಲಾಗಿತ್ತು. ಅದರಂತೆ, ಮೇಲೆ ಓದಲಾದ ಕ್ರ. ಸಂ. 4 ರ ದಿನಾಂಕ : 02-12-10 ಮತ್ತು 11-10-10, 19-10-10, 02-09-10, 04-09-10, 30-08-10, 20-12-10 ಮತ್ತು 04-12-10 ರ ಪತ್ರಗಳಲ್ಲಿ ಜಿಲ್ಲಾಧಿಕಾರಿಗಳು ತಮ್ಮ ವ್ಯಾಪ್ತಿಯಲ್ಲಿ ಇದ್ದ. ಪರಿವೀಕ್ಷಣಾ ತಹಶೀಲ್ದಾರರುಗಳ ಬಗ್ಗೆ ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ (ಕನ್ನಡ ಭಾಷಾ ವಿನಾಯಿತಿ ಸೇರಿ) ಉತ್ತೀರ್ಣರಾಗಿರುವುದಾಗಿ ಹಾಗೂ ಪರಿವೀಕ್ಷಣಾ ತಹಶೀಲ್ದಾರರುಗಳು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಕಾರ್ಯ ನಿರ್ವಹಿಸಿರುತ್ತಾರೆ ಎಂದು ಶಿಫಾರಸ್ಸು ಮಾಡಿದ್ದರಿಂದ, ಮೇಲೆ ಓದಲಾದ ಕ್ರಮ ಸಂಖ್ಯೆ : (5) ರ ದಿನಾಂಕ : 21-01-2011 ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977 ರ ನಿಯಮ 5 (1) ರನ್ವಯ 14 ಪರಿವೀಕ್ಷಣಾ ತಹಶೀಲ್ದಾರರುಗಳು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರ ಸಂಖ್ಯೆ : (6) ರ ದಿನಾಂಕ : 25-01-2011 ರ ಶ್ರೀಮತಿ ಸೌಜನ್ಯ ಭರಣಿ ಮತ್ತು ಶ್ರೀಮತಿ ಕವಿತಾ ಯೋಗಪ್ಪನವರ್ ಇವರುಗಳು ಸಲ್ಲಿಸಿರುವ ಮನವಿಯನ್ನು ಪರಿಶೀಲಿಸಿ, ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977 ರ ನಿಯಮ 5 (1) ರನ್ವಯ ಈ ಕೆಳಕಂಡ ಇಬ್ಬರು ಪರಿವೀಕ್ಷಣಾ ತಹಶೀಲ್ದಾರರು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಪೂರೈಸಿರುತ್ತಾರೆಂದು ಘೋಷಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 462 ಎಎಸ್‌ಡಿ 2010, ಬೆಂಗಳೂರು, ದಿನಾಂಕ: 27-01-2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯ, ಈ ಕೆಳಕಂಡ ಇಬ್ಬರು ಪರಿವೀಕ್ಷಣಾ ತಹಶೀಲ್ದಾರರುಗಳನ್ನು ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977 ರ ನಿಯಮ 5 (1) ರಡಿ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಿದೆ.

| ಕ್ರ.ಸಂ. | ಪರವೀಕ್ಷಣಾ ತಹಶೀಲ್ದಾರರ ಹೆಸರು (ಶ್ರೀಮತಿ) | ಪರವೀಕ್ಷಣಾ ಅವಧಿ ಪ್ರಾರಂಭವಾದ ದಿನಾಂಕ | ಪರವೀಕ್ಷಣಾ ಅವಧಿ ಮುಕ್ತಾಯವಾದ ದಿನಾಂಕ |
|---|---|---|---|
| 1 | ಸೌಜನ್ನ ಭರಣಿ | 6-6-2008 | 5-6-2010 |
| 2 | ಕವಿತಾ ಯೋಗಪನ್ನವರ್ | 7-6-2008 | 6-6-2010 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

ಪಿ.ಆರ್. 490

## ಶಿಕ್ಷಣ ಸಚಿವಾಲಯ

**ವಿಷಯ :** 2010-11 ನೇ ಸಾಲಿಗೆ ರಾಜ್ಯ ವಲಯ ಯೋಜನೇತರ ಅಡಿ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲಾ ಕೊಠಡಿಗಳ ನಿರ್ಮಾಣಕ್ಕಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರುರವರ ಪತ್ರ ಸಂಖ್ಯೆ : ಯೋ : 8 : ಪ್ರಾ. ಪ್ರೌ.ಶಾ.ಕೊ. ದುರಸ್ತಿ [ಯೋಜನೇತರ]1/2010-11/ದಿನಾಂಕ : 17-09-2011.

**ಪ್ರಸ್ತಾವನೆ :**

1. ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರು ರವರು, 2010-11 ನೇ ಸಾಲಿಗೆ ರಾಜ್ಯ ವಲಯ ಯೋಜನೇತರ ಲೆಕ್ಕಶೀರ್ಷಿಕೆ 2202-01-053-0-01-200 ಅಡಿ 11.70 ಕೋಟಿ ರೂಪಾಯಿಗಳನ್ನು ಒದಗಿಸಿದ್ದು, ಅದರಲ್ಲಿ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ದುರಸ್ತಿಗಾಗಿ ಕ್ರಮವಾಗಿ 9.96 ಕೋಟಿ ಮತ್ತು 1.74 ಕೋಟಿ ರೂಗಳಿಗೆ ಪ್ರಸ್ತಾವನೆಯನ್ನು ತಯಾರಿಸಿ ಅನುದಾನ ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.
2. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 225 ಯೋಸಕ 2010, ಬೆಂಗಳೂರು, ದಿನಾಂಕ: 09-02-2011**

**[ಇಡಿ 08 ಸ್ವೀಮರ (ಯುನಿಕ್) 2011, ದಿನಾಂಕ : 09-02-2011]**

3. 2010-11 ನೇ ಸಾಲಿಗೆ ರಾಜ್ಯ ವಲಯ ಯೋಜನೇತರ ಲೆಕ್ಕಶೀರ್ಷಿಕೆ 2202-01-053-0-01-200 ಅಡಿ ಒದಗಿಸಲಾಗಿರುವ ಅನುದಾನದ ಮಿತಿಯೊಳಗೆ ಅನುಬಂಧ-1ರಲ್ಲಿ ತಿಳಿಸಿರುವ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಿಗೆ ಕೊಠಡಿಗಳನ್ನು ಶಾಲಾ ಅಭಿವೃದ್ಧಿ ಮತ್ತು ನಿರ್ವಹಣಾ ಸಮಿತಿಯ ಮೂಲಕ ನಿರ್ಮಾಣ ಮಾಡಲು ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರಿಗೆ ಈ ಕೆಳಕಂಡ ಷರತ್ತನ್ನು ವಿಧಿಸಿ ಅನುಮತಿ ನೀಡಿದೆ.

**ಷರತ್ತುಗಳು :-**

- 2010-11 ನೇ ಸಾಲಿಗೆ ಈ ಉದ್ದೇಶಕ್ಕಾಗಿ ಬಿಡುಗಡೆ ಮಾಡಿರುವ ಅನುದಾನವನ್ನು ಬಳಸಿಕೊಂಡು ಕೂಡಲೇ ಕಾಗಾರಿಯನ್ನು ಪ್ರಾರಂಭಿಸತಕ್ಕದ್ದು.
- ಕಾಮಗಾರಿಯನ್ನು ಪ್ರಚಲಿತವಿರುವ ಕರ್ನಾಟಕ ಪಾರದರ್ಶಕತೆ ಅಧಿನಿಯಮದನ್ವಯ ಕೈಗೊಳ್ಳತಕ್ಕದ್ದು.

- ಎಲ್ಲಾ ಖರೀದಿಗಳಿಗೆ ಸಂಬಂಧಿಸಿದಂತೆ ಪ್ರಚಲಿತವಿರುವ ಕರ್ನಾಟಕ ಪಾರದರ್ಶಕ ಕಾಯ್ದೆಯ ಎಲ್ಲಾ ನಿಯಮಗಳನ್ನೂ ಚಾಚೂ ತಪ್ಪದೇ ಪಾಲಿಸತಕ್ಕದ್ದು.
- ಕಾಮಗಾರಿಯ ಗುಣಮಟ್ಟದ ಬಗ್ಗೆ ಇಲಾಖೆಯ ಅಧಿಕಾರಿಗಳು ಆಗಿಂದ್ದಾಗ್ಗೆ ಪರಿಶೀಲಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಐ.ಎಫ್. ಮಾಗಿ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ, (ಯೋಜನೆ)

**ಸರ್ಕಾರಿ ಆದೇಶ ಸಂಖ್ಯೆ : ಇಡಿ/225/ಯೋಸಕ 2010, ದಿನಾಂಕ : 09–02–2011**

## ಅನುಬಂಧ – 1

**2010–11 ನೇ ಸಾಲಿನ ರಾಜ್ಯವಲಯ ಯೋಜನೇತರ ಲೆಕ್ಕಶೀರ್ಷಿಕೆಯಡಿಯಲ್ಲಿ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ಕೊಠಡಿ ನಿರ್ಮಾಣ ಲೆಕ್ಕಶೀರ್ಷಿಕೆ 2202–01–053–0–01–200**

| ಕ್ರ.ಸಂ. | ಜಿಲ್ಲೆಯ ಹೆಸರು | | ಪ್ರೌಢಶಾಲೆಯ ಹೆಸರು | ಕೊಠಡಿಗಳ ಸಂಖ್ಯೆ | ಕಾಮಗಾರಿ ಅನುದಾನ (ರೂ. ಲಕ್ಷಗಳಲ್ಲಿ) | ಪೀಠೋಪಕರಣ ಅನುದಾನ (ರೂ. ಲಕ್ಷಗಳಲ್ಲಿ) | ಒಟ್ಟು ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|---|---|---|---|---|
| 1. | ಚಿಕ್ಕಮಗಳೂರು | 1 | ಸರ್ಕಾರಿ ಪದವಿ ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ಕಳಸಾಪುರ | 2 | 10.05 | 1.20 | 11.25 |
| | | 2 | ಸರ್ಕಾರಿ ಪದವಿ ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ಚಿಕ್ಕಮಗಳೂರು ನಗರ | 2 | 10.05 | 1.20 | 11.25 |
| | | 3 | ಸರ್ಕಾರಿ ಪದವಿ ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ಸಖರಾಯಪಟ್ಟಣ, ಕಡೂರು ತಾಲ್ಲೂಕು | 2 | 10.05 | 1.20 | 11.25 |
| | | 4 | ಸರ್ಕಾರಿ ಪದವಿ ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ಮಲ್ಲೇನಹಳ್ಳಿ, ಚಿಕ್ಕಮಗಳೂರು ತಾಲ್ಲೂಕು | 2 | 10.05 | 1.20 | 11.25 |
| | | 5 | ಸರ್ಕಾರಿ ಪದವಿ ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ಮೂಗ್ತಿಹಳ್ಳಿ, ಚಿಕ್ಕಮಗಳೂರು ತಾಲ್ಲೂಕು | 2 | 10.05 | 1.20 | 11.25 |
| 2. | ತುಮಕೂರು | 6 | ಬಾಲಿಕಾ ಸರ್ಕಾರಿ ಪದವಿ ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ತಿಪಟೂರು | 2 | 10.05 | 1.20 | 11.25 |
| | | 7 | ಬಾಲಕರ ಸರ್ಕಾರಿ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ತಿಪಟೂರು | 4 | 20.00 | 2.40 | 22.40 |
| | | 8 | ಸರ್ಕಾರಿ ಪ್ರೌಢಶಾಲೆ, ಗಂಗನಘಟ್ಟ, ತಿಪಟೂರು ತಾಲ್ಲೂಕು | 3 | 15.00 | 1.80 | 16.80 |
| 3. | ಬೆಳಗಾವಿ | 9 | ಸರ್ಕಾರಿ ಪ್ರೌಢಶಾಲೆ, ಬೆನಕಟ್ಟಿ, ಸವದತ್ತಿ ತಾಲ್ಲೂಕು | 3 | 15.00 | 1.80 | 16.80 |
| | | 10 | ಸರ್ಕಾರಿ ಪ್ರೌಢಶಾಲೆ, ಚಿಕ್ಕುಂಬಿ, ಸವದತ್ತಿ ತಾಲ್ಲೂಕು | 2 | 10.05 | 1.20 | 11.25 |
| | | 11 | ಸರ್ಕಾರಿ ಪ್ರೌಢಶಾಲೆ, ಕಗದಾಳ, ಸವದತ್ತಿ ತಾಲ್ಲೂಕು | 2 | 10.05 | 1.20 | 11.25 |
| | | 12 | ಸರ್ಕಾರಿ ಪ್ರೌಢಶಾಲೆ, ಅರಟಗಲ್, ಸವದತ್ತಿ ತಾಲ್ಲೂಕು | 2 | 10.05 | 1.20 | 11.25 |
| | | 13 | ಸರ್ಕಾರಿ ಪ್ರೌಢಶಾಲೆ, ಶಿರೋಲಿ, ಖಾನಾಪುರ ತಾಲ್ಲೂಕು | 3 | 15.00 | 1.80 | 16.80 |
| | | 14 | ಸರ್ಕಾರಿ ಪ್ರೌಢಶಾಲೆ, ಚಿಕ್ಕದಿನ್ನಿಕೊಪ್ಪ, ಖಾನಾಪುರ ತಾಲ್ಲೂಕು | 1 | 5.40 | 0.60 | 6.00 |
| | | 15 | ಸರ್ಕಾರಿ ಪ್ರೌಢಶಾಲೆ, ಮುಗಳಿಹಾಳ, ಖಾನಾಪುರ ತಾಲ್ಲೂಕು | 1 | 5.40 | 0.60 | 6.00 |

| | | | | | | | |
|---|---|---|---|---|---|---|---|
| 4. | ಚಿಕ್ಕೋಡಿ ಶೈಕ್ಷಣಿಕ ಜಿಲ್ಲೆ | 16 | ಸರ್ಕಾರಿ ಉರ್ದು ಪ್ರೌಢಶಾಲೆ ಯಮಕನಮರಡಿ, ಹುಕ್ಕೇರಿ ತಾಲ್ಲೂಕು | 3 | 15.00 | 1.80 | 16.80 |
| | | 17 | ಸರ್ಕಾರಿ ಪ್ರಾಥಮಿಕ ಶಾಲೆ, ನಾಯಿಂಗ್ಲಜ, ಚಿಕ್ಕೋಡಿ ತಾಲ್ಲೂಕು | 2 | 8.00 | 1.00 | 9.00 |
| | | 18 | ಸರ್ಕಾರಿ ಪ್ರಾಥಮಿಕ ಶಾಲೆ, ಕೆರೂರ ವಾಡಿ (ಅರಬ್ಬಾನವಾಡಿ), ಚಿಕ್ಕೋಡಿ ತಾಲ್ಲೂಕು | 2 | 8.00 | 1.00 | 9.00 |
| | | 19 | ಸರ್ಕಾರಿ ಪ್ರಾಥಮಿಕ ಶಾಲೆ, ಇಂಗಳಿ, ಚಿಕ್ಕೋಡಿ ತಾಲ್ಲೂಕು | 2 | 8.00 | 1.00 | 9.00 |
| | | 20 | ಸರ್ಕಾರಿ ಪ್ರೌಢಶಾಲೆ, ನಿಪ್ಪಾಣಿ ನಗರ | 5 | 23.20 | 3.00 | 26.20 |
| 5. | ಶಿರಸಿ ಶೈಕ್ಷಣಿಕ ಜಿಲ್ಲೆ | 21 | ಸರ್ಕಾರಿ ಪ್ರೌಢಶಾಲೆ, ಮುಂಡಗೋಡ, ಮುಂಡಗೋಡ ತಾಲ್ಲೂಕು | 2 | 10.05 | 1.20 | 11.25 |
| | | 22 | ಸರ್ಕಾರಿ ಪ್ರೌಢಶಾಲೆ, ಮಳಗಿ, ಮುಂಡಗೋಡ ತಾಲ್ಲೂಕು | 2 | 10.05 | 1.20 | 11.25 |
| | | 23 | ಸರ್ಕಾರಿ ಪ್ರೌಢಶಾಲೆ, ಯಲ್ಲಾಪುರ ಯಲ್ಲಾಪುರ ತಾಲ್ಲೂಕು | 2 | 10.05 | 1.20 | 11.25 |
| | | 24 | ಸರ್ಕಾರಿ ಪ್ರೌಢಶಾಲೆ, ಜಿಬ್ಬಲಗೇರಿ, ಹಳಿಯಾಳ ತಾಲ್ಲೂಕು | 5 | 23.20 | 3.00 | 26.20 |
| | | 25 | ಸರ್ಕಾರಿ ಪ್ರೌಢಶಾಲೆ, ಬಂಡಲ, ಶಿರಸಿ ತಾಲ್ಲೂಕು | 2 | 10.05 | 1.20 | 11.25 |
| 6. | ಉತ್ತರ ಕನ್ನಡ | 26 | ಸರ್ಕಾರಿ ಪ್ರೌಢಶಾಲೆ, ಸುಂಕಸಾಳ, ಅಂಕೋಲಾ ತಾಲ್ಲೂಕು | 3 | 15.00 | 1.80 | 16.80 |
| 7. | ದಾವಣಗೆರೆ | 27 | ಸರ್ಕಾರಿ ಪ್ರೌಢಶಾಲೆ, ಪಿ. ಜೆ. ಬಡಾವಣೆ, ದಾವಣಗೆರೆ | 3 | 15.00 | 1.80 | 16.80 |
| | | 28 | ಸರ್ಕಾರಿ ಮೋತಿವೀರಪ್ಪ ಪ್ರೌಢಶಾಲೆ, ದಾವಣಗೆರೆ | 2 | 10.05 | 1.20 | 11.25 |
| 8. | ಗುಲ್ಬರ್ಗಾ | 29 | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಆಲೂರು, ಜೇವರ್ಗಿ ತಾಲ್ಲೂಕು | 2 | 8.00 | 1.00 | 9.00 |
| | | 30 | ಸರ್ಕಾರಿ ಪ್ರೌಢಶಾಲೆ, ಆಲೂರು, ಜೇವರ್ಗಿ ತಾಲ್ಲೂಕು | 4 | 20.00 | 2.40 | 22.40 |
| 9. | ಶಿವಮೊಗ್ಗ | 31 | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಕಣಕಟ್ಟೆ ಬಡಾವಣೆ, ಭದ್ರಾವತಿ ನಗರ, (ಕಂಪೌಂಡ ನಿರ್ಮಾಣ) | 100 ಚ.ಮೀ. | 2.30 | – | 2.30 |
| 10. | ಬಾಗಲಕೋಟೆ | 32 | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ತೇರದಾಳ, ಜಮಖಂಡಿ ತಾಲ್ಲೂಕು | ದುರಸ್ತಿಗೆ | 10.00 | – | 10.00 |
| 11. | ಬೆಂಗಳೂರು ನಗರ | 33 | ಸರ್ಕಾರಿ ಪ್ರೌಢಶಾಲೆ, ರಾಜನಕುಂಟೆ ಬೆಂಗಳೂರು ಉತ್ತರ | 2 | 10.05 | 1.20 | 11.25 |
| 12. | ಉಡುಪಿ ಜಿಲ್ಲೆ | 34 | ಸರ್ಕಾರಿ ಪ್ರೌಢಶಾಲೆ, ಬಡಾ ಗ್ರಾಮ, ಉಡುಪಿ ತಾಲ್ಲೂಕು (ಕಂಪೌಂಡ ನಿರ್ಮಾಣ) | 200 ಚ.ಮೀ. | 4.60 | – | 4.60 |
| | | 35 | ಸರ್ಕಾರಿ ಪ್ರೌಢಶಾಲೆ, ಎರಮಾಳು ಗ್ರಾಮ, ಉಡುಪಿ ತಾಲ್ಲೂಕು | 150 ಚ.ಮೀ. | 3.50 | – | 3.50 |
| | | | **ಒಟ್ಟು** | **76** | | | **435.15** |

**ಐ.ಎಫ್. ಮಾಗಿ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ, (ಯೋಜನೆ)

ಪಿ.ಆರ್. 491

## ಸಹಕಾರ ಸಚಿವಾಲಯ

**ವಿಷಯ :** ರಾಜ್ಯದ ರೈತರಿಗೆ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು 2008-09 ನೇ ಸಾಲಿನಲ್ಲಿ ಶೇ. 3ರ ಬಡ್ಡಿ ದರದಲ್ಲಿ ನೀಡಿದ ಸಾಲಗಳ ಪೈಕಿ ವಸೂಲಾಗಿರುವ ಸಾಲಗಳ ಬಡ್ಡಿಯ ವ್ಯತ್ಯಾಸದ ಸಹಾಯಧನ ಹಾಗೂ ಬಾಕಿ ಉಳಿದಿರುವ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಸಿಒ 89 ಸಿಎಲ್‌ಎಸ್ 2008 ದಿನಾಂಕ : 16-01-2009, 19-03-2009 & 05-06-2009.
2. ಸರ್ಕಾರಿ ಆದೇಶ ಸಂಖ್ಯೆ : ಸಿಒ 206 ಸಿಎಲ್‌ಎಸ್ 2009 ದಿನಾಂಕ : 11-09-2009, 24-10-2009.
3. ಸರ್ಕಾರಿ ಆದೇಶ ಸಂಖ್ಯೆ : ಸಿಒ 73 ಸಿಎಲ್‌ಎಸ್ 2007 ದಿನಾಂಕ : 17-11-2009.
4. ಸರ್ಕಾರಿ ಆದೇಶ ಸಂಖ್ಯೆ : ಸಿಒ 206 ಸಿಎಲ್‌ಎಸ್ 2009 ದಿನಾಂಕ : 05-03-2010, 07-06-2010, 07-08-2010 & 25-08-2010.
5. ಸರ್ಕಾರಿ ಆದೇಶ ಸಂಖ್ಯೆ : ಸಿಒ 206 ಸಿಎಲ್‌ಎಸ್ 2009 ದಿನಾಂಕ : 16-11-2010.
6. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಸಿಆರ್‌ಡಿ/4/ಕೆಆರ್‌ಎಫ್/2008-09, ದಿನಾಂಕ : 20-10-2010 & 22-11-2010.

**ಪ್ರಸ್ತಾವನೆ :**

ಮೇಲೆ ಓದಲಾದ (1), (2), (3) ಮತ್ತು (4) ರ ಆದೇಶಗಳಲ್ಲಿ ಸಹಕಾರಿ ಸಂಸ್ಥೆಗಳು ರೈತರಿಗೆ ನೀಡಿದ ಸಾಲಗಳ ಪೈಕಿ ವಸೂಲಾದ ಸಾಲಗಳ ಮೇಲಿನ ಬಡ್ಡಿ ಸಹಾಯಧನ ರೂ. 55.00 ಕೋಟಿಗಳು, ರೂ. 62.25 ಕೋಟಿಗಳು, ರೂ. 30.80 ಕೋಟಿಗಳು, ರೂ. 5.00 ಕೋಟಿಗಳು, ರೂ. 288.73 ಲಕ್ಷಗಳು, ರೂ. 2,23,930.00 ಲಕ್ಷಗಳು, ರೂ. 7110.72 ಲಕ್ಷಗಳು, ರೂ. 40.00 ಕೋಟಿಗಳು ಹಾಗೂ ರೂ. 6471.26 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (5) ರ ಆದೇಶದಲ್ಲಿ 2008-2009 ನೇ ಸಾಲಿಗೆ ಸಂಬಂಧಿಸಿದಂತೆ ರೂ. 1265.37 ಲಕ್ಷಗಳನ್ನು ಬಿಡುಗಡೆ ಮಾಡಿದ್ದು, ಸದರಿ ಲೆಕ್ಕಶೀರ್ಷಿಕೆಯಡಿ ಯಾವುದೇ ಹಣ ಲಭ್ಯವಿರುವುದಿಲ್ಲವೆಂದು ಪ್ರೊ|| ಎ. ವೈದ್ಯನಾಥನ್ ಕಾರ್ಯಪಡೆಯ ವರದಿಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಸಹಕಾರಿ ಸಂಸ್ಥೆಗಳಿಗೆ ನಿಗದಿತ ಸಮಯದಲ್ಲಿ ಹಣ ಬಿಡುಗಡೆ ಮಾಡಬೇಕಾಗಿರುವ ಹಿನ್ನೆಲೆಯಲ್ಲಿ 2008-09, 2009-10 ನೇ ಸಾಲಿಗೆ ಅಲ್ಪಾವಧಿ, ಮಧ್ಯಮಾವಧಿ ಹಾಗೂ ದೀರ್ಘಾವಧಿ ಸಾಲಗಳಿಗೆ ಅವಶ್ಯವಿರುವ ಕ್ರೋಢೀಕೃತ ಬಡ್ಡಿ ಸಹಾಯದನದ ಮೊತ್ತ ರೂ. 26080.47 ಲಕ್ಷಗಳನ್ನು 2010-11 ನೇ ಸಾಲಿನ ಪೂರಕ ಅಂದಾಜಿನಲ್ಲಿ ಒದಗಿಸುವಂತೆ ಮೇಲೆ ಓದಲಾದ (6) ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಕೋರಿರುತ್ತಾರೆ. ಸದರಿ ಕೋರಿಕೆಯನ್ನು ಪರಿಗಣಿಸಿ ರೂ. 31.72 ಕೋಟಿಗಳನ್ನು ಹೆಚ್ಚುವರಿಯಾಗಿ ಬಿಡುಗಡೆ ಮಾಡಲು ತೀರ್ಮಾನಿಸಲಾಗಿರುತ್ತದೆ.

ಆದುದರಿಂದ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 206 ಸಿಎಲ್‌ಎಸ್ 2009, ಬೆಂಗಳೂರು, ದಿನಾಂಕ: 09-02-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಹಕಾರಿ ಸಂಸ್ಥೆಗಳು ರೈತರಿಗೆ ನೀಡಿದ ಸಾಲಗಳ ಪೈಕಿ ವಸೂಲಾದ ಸಾಲಗಳ ಮೇಲಿನ ಬಡ್ಡಿ ಸಹಾಯಧನದ ಕ್ಲೇಮುಗಳ ಬಾಬ್ತು **ರೂ. 31.72 ಕೋಟಿಗಳನ್ನು (ರೂಪಾಯಿ ಮೂವತ್ತೊಂದು ಕೋಟಿ ಎಪ್ಪತ್ತೆರಡು ಲಕ್ಷಗಳು ಮಾತ್ರ)** ಹೆಚ್ಚುವರಿ ಅನುದಾನವಾಗಿ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು 2010-11 ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ **"2425-00-107-2-41-106-ಸಹಾಯಧನ (ಯೋಜನೆ)"** ಅಡಿ ಒದಗಿಸಲಾದ ಅನುದಾನದಿಂದ ಭರಿಸತಕ್ಕದ್ದು.

ಸದರಿ ಮೊಬಲಗನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲಾಗಿದೆ.

1. ಬಡ್ಡಿ ಸಹಾಯಧನದ ಎಲ್ಲ ಕ್ಲೇಮುಗಳು ಅಸಲಿನ ಪೂರ್ಣ ಮರುಪಾವತಿಗೆ ಸಂಬಂಧಪಟ್ಟಿದ್ದು, ಸಾಲ ಮರುಪಾವತಿ ದಿನಾಂಕ ಅಥವಾ ಸಾಲ ಮರುಪಾವತಿ ಗಡುವು ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇರುತ್ತವೆ ಎಂದು ಖಾತ್ರಿಪಡಿಸಿಕೊಳ್ಳತಕ್ಕದ್ದು.
2. ಕ್ಲೇಮುಗಳು ಸರ್ಕಾರಿ ಆದೇಶ ಸಂಖ್ಯೆ : ಸಿಒ 66 ಸಿಎಲ್ ಎಸ್ 2009 ದಿನಾಂಕ : 20-08-2009 ರ ಪ್ರಕಾರ ಇರುತ್ತವೆಂದು ಖಾತ್ರಿಪಡಿಸಿಕೊಳ್ಳತಕ್ಕದ್ದು.

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು.

ಈ ಆದೇಶವನ್ನು ಆಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : **ಎಫ್‌ಡಿ/43/ವೆಚ್ಚ-2/2011 ದಿನಾಂಕ : 01-02-2011** ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ

ಪಿ.ಆರ್. 492

## ಸಹಕಾರ ಸಚಿವಾಲಯ

**ವಿಷಯ :** ಕೃಷಿ ಪತ್ತಿನ ಸಹಕಾರಿ ಸಂಸ್ಥೆಗಳ ಪುನಶ್ಚೇತನಕ್ಕಾಗಿ ಭಾರತ ಸರ್ಕಾರವು ರೂಪಿಸಿರುವ ಪುನಶ್ಚೇತನ ಪ್ಯಾಕೇಜ್ ಅನುಷ್ಠಾನ – ರಾಜ್ಯ ಸರ್ಕಾರದ ಪಾಲನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಸಿಒ 129 ಸಿಸಿಬಿ 2009, (ಭಾ–1), ದಿನಾಂಕ : 26–03–2010.

2. ನಬಾರ್ಡಿನ ಪತ್ರ ಸಂಖ್ಯೆ : ಎನ್.ಬಿ./ಕೆ.ಎ./ಡಿಸಿಆರ್ ಆರ್/254/ಡಿಸಿಆರ್ಆರ್/147/2010–11, ದಿನಾಂಕ : 12–01–2011.

3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಸಿಆರ್ ಡಿ/ವೈಸ/16/2010–11, ದಿನಾಂಕ : 14–01–2011.

**ಪ್ರಸ್ತಾವನೆ :**

ರಾಜ್ಯ ಸರ್ಕಾರವು ಪ್ರೊ॥ ಎ. ವೈದ್ಯನಾಥನ್ ಕಾರ್ಯಪಡೆಯ ಶಿಫಾರಸುಗಳ ಆಧಾರದ ಮೇಲೆ ಭಾರತ ಸರ್ಕಾರವು ಕೃಷಿ ಪತ್ತಿನ ಸಹಕಾರಿ ಸಂಸ್ಥೆಗಳ ಪುನರುಜ್ಜೀವನಕ್ಕಾಗಿ ರೂಪಿಸಿರುವ ಪುನಶ್ಚೇತನ ಪ್ಯಾಕೇಜನ್ನು ಅನುಷ್ಠಾನಗೊಳಿಸಲು ಮತ್ತು ಅದರಡಿ ರಾಜ್ಯ ಸರ್ಕಾರದ ಪಾಲಿನ ಮೊತ್ತ ರೂ. 39.53 ಕೋಟಿಗಳನ್ನು ಬಿಡುಗಡೆ ಮಾಡಲು ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಮಂಜೂರಾತಿ ನೀಡಲಾಗಿರುತ್ತದೆ. ಒಟ್ಟು 21 ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳ ವ್ಯಾಪ್ತಿಗೆ 'ಬಿ' ಮತ್ತು 'ಸಿ' ವರ್ಗದ 2106 ಪ್ಯಾಕ್ಸ್‌ಗಳಿಗೆ ಬೀದರ್, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳ 314 'ಎ' ವರ್ಗದ ಪ್ಯಾಕ್ಸ್‌ಗಳಿಗೆ ರಾಜ್ಯ ಸರ್ಕಾರದ ಪಾಲು ರೂ. 52,36,12,050/– ಗಳಿದ್ದು ಈ ಪೈಕಿ 220 ಅನರ್ಹ ಪ್ಯಾಕ್ಸ್‌ಗಳಿಗೆ ಸಂಬಂಧಿಸಿದಂತೆ ರೂ.5,07,17,650/– ರಾಜ್ಯ ಸರ್ಕಾರದ ಪಾಲನ್ನು ಹೊರತುಪಡಿಸಿ ರೂ. 47,28,94,400/– ಗಳನ್ನು ಬಿಡುಗಡೆಗೊಳಿಸುವಂತೆ ಸಹಕಾರ ಸಂಘಗಳ ನಿಬಂಧಕರು ಮೇಲೆ ಓದಲಾದ (3) ರ ಪತ್ರದಲ್ಲಿ ಕೋರಿರುತ್ತಾರೆ. ಅದರ ವಿವರಗಳು ಈ ಕೆಳಗಿನಂತಿವೆ.

(ರೂ. ಕೋಟಿಗಳಲ್ಲಿ)

| ಕ್ರಮ ಸಂಖ್ಯೆ | ವರ್ಗೀಕರಣ | ಪ್ಯಾಕ್ಸ್ ಸಂಖ್ಯೆ | ಭಾರತ ಸರ್ಕಾರದ ಪಾಲು | ಕರ್ನಾಟಕ ಸರ್ಕಾರದ ಪಾಲು | ಒಟ್ಟು ಮೊತ್ತ | ಪ್ಯಾಕ್ಸ್ ಗಳ ಪಾಲು | ಒಟ್ಟು |
|---|---|---|---|---|---|---|---|
| 01. | ಎ ವರ್ಗದ ಬೀದರ್, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳ ಪ್ಯಾಕ್ಸ್‌ಗಳ ಮೊತ್ತ | 314 | 23.73 | 1.58 | 25.31 | 5.55 | 30.86 |
| 02. | ಬಿ ವರ್ಗದ ಎಲ್ಲಾ ಪ್ಯಾಕ್ಸ್‌ಗಳು (ದಿ: 30–06–2006 ಮತ್ತು 2007 ಕ್ಕೆ ಶೇಕಡಾ 50 ವಸೂಲಾತಿ ಸಾಧಿಸಿರುವವು) | 624 | 98.27 | 14.95 | 113.22 | 12.29 | 125.51 |
| 03. | ಸಿ ವರ್ಗದ ಎಲ್ಲಾ ಪ್ಯಾಕ್ಸ್‌ಗಳು (ದಿ: 30–06–2006 ಮತ್ತು 2007 ಕ್ಕೆ ಶೇಕಡಾ 50 ವಸೂಲಾತಿ ಸಾಧಿಸಿರುವವು) | 1482 | 295.32 | 30.76 | 326.08 | 28.47 | 354.55 |
| | **ಒಟ್ಟು** | **2420** | **417.32** | **47.29** | **464.61** | **46.31** | **510.92** |
| 04. | ಅನರ್ಹ ಪ್ಯಾಕ್ಸ್‌ಗಳು | 220 | 45.07 | 5.07 | 51.14 | 6.54 | 56.68 |
| | **ಒಟ್ಟು ಮೊತ್ತ** | **2640** | **462.39** | **52.36** | **514.75** | **52.85** | **567.60** |

ಆದುದರಿಂದ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 138 ಸಿಎಲ್ ಎಸ್ 2007 (ಭಾ–1), ಬೆಂಗಳೂರು, ದಿನಾಂಕ: 11–02–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಅಲ್ಪಾವಧಿ ಸಹಕಾರ ಕೃಷಿ ಪತ್ತಿನ ವ್ಯವಸ್ಥೆಯ ಪುನಶ್ಚೇತನ ಪ್ಯಾಕೇಜನ್ನು ಅನುಷ್ಠಾನಗೊಳಿಸುತ್ತಿರುವ ಸಂಬಂಧ ರಾಜ್ಯ ಸರ್ಕಾರದ ಪಾಲನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡುತ್ತದೆ ಹಾಗೂ ಅರ್ಹ ಪ್ಯಾಕ್ಸ್‌ಗಳ 314 'ಎ' ವರ್ಗ (ಬೀದರ್ ಮತ್ತು ದಕ್ಷಿಣ ಕನ್ನಡ) 624 'ಬಿ' ವರ್ಗ ಮತ್ತು 1482 'ಸಿ' ವರ್ಗದ ಒಟ್ಟು 2,420 ಪ್ಯಾಕ್ಸ್‌ಗಳಿಗೆ **ರೂ. 47.29 ಕೋಟಿಗಳನ್ನು** (ರೂಪಾಯಿ ನಲವತ್ತೇಳು ಕೋಟಿ ಇಪ್ಪತ್ತೊಂಬತ್ತು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲು ಮಂಜೂರಾತಿ ನೀಡುತ್ತದೆ.

ಈ ವೆಚ್ಚವನ್ನು 2010–11 ನೇ ಸಾಲಿನ ಆಯವ್ಯಯದಲ್ಲಿ **"2425–00–107–2–49–ಸಹಕಾರಿ ಆರ್ಥಿಕ ಸಂಸ್ಥೆಗಳ ಪುನರ್ ಚೇತನಕ್ಕಾಗಿ ಆರ್ಥಿಕ ನೆರವು–100–ಧನಸಹಾಯ/ಪರಿಹಾರ"** ಲೆಕ್ಕಶೀರ್ಷಿಕೆ ಅಡಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು ಮತ್ತು ಸದರಿ ಹಣವನ್ನು ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನಲ್ಲಿ ಠೇವಣಿಸತಕ್ಕದ್ದು. ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕು ಈ ಹಣವನ್ನು ನಬಾರ್ಡು ನೀಡುವ ಮಾರ್ಗಸೂಚಿಗಳನ್ವಯ ಡಿಸಿಸಿ ಬ್ಯಾಂಕುಗಳಿಗೆ ತನ್ಮೂಲಕ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಗೆ ಬಿಡುಗಡೆ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : **ಎಫ್‌ಡಿ/36/ವೆಚ್ಚ–2/2011 ದಿನಾಂಕ : 03–02–2011** ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ

ಪಿ.ಆರ್. 493

## ಕಂದಾಯ ಸಚಿವಾಲಯ

**ವಿಷಯ :** ಆಸರೆ ಯೋಜನೆಯಡಿಯಲ್ಲಿ ಮನೆ ನಿರ್ಮಾಣಕ್ಕಾಗಿ ವಿದ್ಯುಚ್ಛಕ್ತಿ ವ್ಯತ್ಯಯ ಉಂಟಾದ ಗ್ರಾಮಗಳಲ್ಲಿ ಡೀಸೆಲ್ ಜನರೇಟರನ್ನು ಬಾಡಿಗೆ ಆಧಾರದ ಮೇಲೆ ಪಡೆಯುವ ಬಗ್ಗೆ.

**ಓದಲಾಗಿದೆ :** 1. ಬಾಗಲಕೋಟೆ ಜಿಲ್ಲಾಧಿಕಾರಿಗಳ ಪತ್ರ ಸಂ : ಸಿಎಎಲ್/ಸಿಆರ್/06/2010-11, ದಿನಾಂಕ : 24-12-2010.
2. ಕೊಪ್ಪಳ ಜಿಲ್ಲಾಧಿಕಾರಿಗಳ ಪತ್ರ ಸಂ : ಕಂದಾಯ/ನೈವಿ/ಆಸರೆ/94/2010-11, ದಿನಾಂಕ : 15-12-2010.
3. ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಪತ್ರ ಸಂ : ಕಂ/ಭೂಸ್ವಾ/53/2010-11, ದಿನಾಂಕ : 08-12-2010.

**ಪ್ರಸ್ತಾವನೆ :**

ಮೇಲೆ ಓದಲಾದ ಬಾಗಲಕೋಟೆ, ಕೊಪ್ಪಳ ಮತ್ತು ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಪತ್ರಗಳಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆ ನಿರ್ಮಾಣಕ್ಕಾಗಿ ವಿದ್ಯುಚ್ಛಕ್ತಿ ವ್ಯತ್ಯಯ ಉಂಟಾದ ಗ್ರಾಮಗಳಲ್ಲಿ ಡೀಸೆಲ್ ಜನರೇಟರ್‌ನ್ನು ಬಾಡಿಗೆ ಆಧಾರದ ಮೇಲೆ ಪಡೆಯಲಾಗಿರುತ್ತದೆ. ಈ ಡೀಸೆಲ್ ಜನರೇಟರ್‌ನಿಂದ ವಿದ್ಯುಚ್ಛಕ್ತಿ ಪಡೆದು ಮನೆ ನಿರ್ಮಾಣಕ್ಕೆ ನೀರನ್ನು ಒದಗಿಸಲಾಗಿರುತ್ತದೆ. ಆದುದರಿಂದ, ಈ ಡೀಸೆಲ್ ಜನರೇಟರ್‌ನ ಬಾಡಿಗೆಯ ಹಣ ಬಾಗಲಕೋಟೆ ಜಿಲ್ಲೆ – ರೂ. 2,97,321/–, ಕೊಪ್ಪಳ ಜಿಲ್ಲೆ – ರೂ. 9,76,000/– ಮತ್ತು ಗುಲ್ಬರ್ಗಾ ಜಿಲ್ಲೆ – ರೂ. 1,72,596/– ಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಈ ಹಿನ್ನಲೆಯಲ್ಲಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 402 ಟಿಎನ್‌ಆರ್ 2010, ಬೆಂಗಳೂರು, ದಿನಾಂಕ: 10-02-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆಗಳ ನಿರ್ಮಾಣಕ್ಕಾಗಿ ಡೀಸೆಲ್ ಜನರೇಟರ್‌ನ್ನು ಬಾಡಿಗೆ ಆಧಾರದ ಮೇಲೆ ಪಡೆದ ಬಾಬ್ತು ಬಾಗಲಕೋಟೆ, ಕೊಪ್ಪಳ ಮತ್ತು ಗುಲ್ಬರ್ಗಾ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಕೆಳಕಂಡಂತೆ ಬಿಡುಗಡೆ ಮಾಡಲಾಗಿದೆ.

| ಕ್ರಮ ಸಂಖ್ಯೆ | ಜಿಲ್ಲೆಗಳ ಹೆಸರು | ಬಿಡುಗಡೆ ಮಾಡಿದ ಮೊತ್ತ |
|---|---|---|
| 1 | ಬಾಗಲಕೋಟೆ | ರೂ. 2,97,321/– |
| 2 | ಕೊಪ್ಪಳ | ರೂ. 9,76,000/– |
| 3 | ಗುಲ್ಬರ್ಗಾ | ರೂ. 1,72,596/– |
| | ಒಟ್ಟು | ರೂ. 14,45,917/– |

**(ರೂಪಾಯಿ ಹದಿನಾಲ್ಕು ಲಕ್ಷದ ನಲವತ್ತೈದು ಸಾವಿರದ ಒಂಬೈನೂರ ಹದಿನೇಳು ಮಾತ್ರ)**

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 8235-00-111-0-02 'Public Contributions to the Calamity Relief ಅಡಿಯಲ್ಲಿ ಭರಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಜಿಲ್ಲಾಧಿಕಾರಿಗಳು ಸದರಿ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಡ್ರಾ ಮಾಡಲು ಪೇಯೀಸ್ ರಸೀದಿ (ಸಿಟಿಎಸ್-8) ಬಿಲ್ಲು ತಯಾರಿಸಿ, ಮೇಲು ಸಹಿ ಮಾಡಿ ಖಜಾನೆಗೆ ಸಲ್ಲಿಸಲು ಸೂಚಿಸಿದೆ.

ಈಗ ಬಿಡುಗಡೆ ಮಾಡುತ್ತಿರುವ ಅನುದಾನಕ್ಕೆ ಹಣ ಬಳಕೆ ಪತ್ರವನ್ನು ವೆಚ್ಚದ ವಿವರಗಳೊಂದಿಗೆ ಸಲ್ಲಿಸುವುದು. ಹಾಗೂ ಭೌತಿಕ ಹಾಗೂ ಆರ್ಥಿಕ ಪ್ರಗತಿಯ ವಿವರಗಳನ್ನು ಸಹ ಸಲ್ಲಿಸುವುದು.

ಈ ಮೊತ್ತವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಉಪಯೋಗಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಗಂಗಾಧರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ವಿ.ನಿ & ಸೇವೆಗಳು-2)

ಪಿ.ಆರ್. 495

## HORTICULTURE SECRETARIAT

**Sub :-** "Scheme for Integrated Farming in Coconut for Productivity/Improvement with Coconut Development Board Assistance (100% CDB)" Release of funds-reg.

**Read :-**
1) Government Order No. HCD 51 HPP 2010, dated 10-06-2010
2) Government Order No. HCD 51 HPP 2010, dated 16-07-2010
3) Government Order No. HCD 51 HPP 2010, dated 12-08-2010
4) Government Order No. HCD 51 HPP 2010, dated 24-12-2010
5) Government Order No. HCD 51 HPP 2010, dated 07-01-2011
6) CDB letter No. ROB/13011/Dev-Kar/Sch/10-11/651, dated 03-02-2011
7) Government Order No. HCD 51 HPP 2010, dated 03-02-2011
8) Letter of Director of Horticulture No. ತೋಇ/ತೋಬೆ/ಸತೋಅ-2/1/2010-11, dated 07-02-2011.

**Preamble:-**

1. State Level Administrative approval was accorded for implementing the Coconut Development Board programme during 2010-11 with a total financial outlay of Rs. 709.29 lakhs vide Government Order read at (1) above. Out of this Rs. 356.25 lakhs to be implemented by Department of Horticulture and Rs. 353.04 lakhs by Coconut Development

Board directly out of Rs. 356.25 lakhs the State share is Rs. 3.125 lakhs and Coconut Development Board share has been Rs. 353.125 lakhs.

2. During 2010-11. Coconut Development Board has so far released the following funds:

| Sl. No. | D. D. No. | Amount in Rs. |
|---|---|---|
| 1 | D. D. No. 069247, dated 23-06-2010 | 2,46,72,000/- |
| 2 | D. D. No. 71334, dated 22-10-2010 | 1,56,250/- |
| 3 | D. D. No. 992559 to 992567 dated 05-01-2011 | 87,50,000/- |
| 4 | D. D. No. 992933 to 992940, dated 27-01-2011 | 70,00,000/- |
| | Total | 4,05,78,250/- |

Accordingly, an amount Rs. 175.00 lakhs, Rs. 87.09 lakhs. Rs. 1.56 lakhs and Rs. 87.50 lakhs amounting to Rs. 351.15 lakhs were released to Director of Horticulture under the "Scheme for Integrated Farming in Coconut for Productivity/Improvement with Coconut Development Board Assistance (100% CDB)" vide Government Orders read at (2), (3) (4) and (7) above.

3. State Level Administrative Approval has been accorded for implementing the Coconut Development Board programmes during 2010-11 with an additional financial outlay of Rs. 70.00 lakhs vide Government Order read at (5) above.

4. Coconut Development Board vide its letter read at (6) above has released an amount of Rs. 70,00,000/- to the Secretary, Horticulture through 8 Demand Drafts No. 992933 to 992940 dated 27-01-2011 for covering 400 hectares.

| Particulars | Amount Rs. |
|---|---|
| Integrated Farming in coconut holdings for productivity/improvement in Karnataka State Laying out of demonstration plots (400 ha. New additional area allotted). | 70,00,000/- |

5. The Director of Horticulture has requested to release an amount of Rs. 70,00,000 for implementation of the Coconut Development Board programme vide letter read at (8) above.

6. This has been examined and hence this Order:

**Government Order No. HCD 51 HPP 2010, Bangalore, Dated 14-02-2011**

1. Government sanction is hereby accorded to release an amount of Rs. 70,00,000/ -(Rupees Seventy Lakhs only) to the Director of Horticulture under the "Scheme for Integrated Farming in Coconut for Productivity/Improvement in the State-Laying out of demonstration plots (400 ha. New additional area allotted)" during 2010-11 under the Head of Account 2401-00-108-2-35-100 (Financial Assistance/Relief) towards 100% Coconut Development Board share.

2. This order is issued with the concurrence by the Internal Financial Advisor, Agriculture and Horticulture Department vide Note ತೋಇ 23 ಆಂಅಸ 2010, ದಿನಾಂಕ 10–02–2011.

By Order and in the name of the Governor of Karnataka

**B. C. Prakash**

Under Secretary to Government

Horticulture Department

PR. No. 509

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

ತಿದ್ದುಪಡಿ

ಸಂಖ್ಯೆ: ವಾಕೈ 18 ರೇಯೋವಿ 2010, ಬೆಂಗಳೂರು, ದಿನಾಂಕ 15–02–2011

ದಿನಾಂಕ 6–8–2010ರ ಸರ್ಕಾರಿ ಆದೇಶ ಸಂಖ್ಯೆ: ವಾಕೈ 18 ರೇಯೋವಿ 2010ರ ಆದೇಶಭಾಗದ 2ನೇ ಸಾಲಿನಿಂದಿರುವ "ಒಂದು ರೇಷ್ಮೆ ರೀಲಿಂಗ್ ಕಾಂಪ್ಲೆಕ್ಸ್ ಕಟ್ಟಡ ಮತ್ತು ಒಂದು ಚಾಕಿ ಸಾಕಾಣಿಕಾ ಕೇಂದ್ರ ಕಟ್ಟಡವನ್ನು ಒಳಗೊಂಡಂತೆ ಖಾಲಿ ಇರುವ ಅಂದಾಜು 6.00 ಎಕರೆ ಜಮೀನನ್ನು" ಎಂಬುದಕ್ಕೆ ಬದಲಾಗಿ" ಶಿಥಿಲಾವಸ್ಥೆಯಲ್ಲಿರುವ ಅಮ್ಲೋಪಚಾರ ಕಟ್ಟಡ ಮತ್ತು ಅತಿಥಿಗೃಹ ಒಳಗೊಂಡಂತೆ 2.31 ಎಕರೆ ಜಮೀನನ್ನು" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. ನಂ. 510

## ಕಂದಾಯ ಸಚಿವಾಲಯ

**ವಿಷಯ** : ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಮರಳವಾಡಿ ಹೋಬಳಿ, ಜಕ್ಕಸಂದ್ರ ಗ್ರಾಮದ ಜೈನ್ ವಿದ್ಯಾ ಸಂಸ್ಥೆಯೊಂದಿಗೆ ಶಾಮೀಲಾಗಿ ಅಕ್ರಮ ಖಾತೆ ಬದಲಾವಣೆ ಮಾಡಿರುವ ಅಧಿಕಾರಿ/ನೌಕರರ ವಿರುದ್ಧದ ಆಪಾದನೆಗೆ ಇಲಾಖಾ ವಿಚಾರಣೆ-ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ** : 1) ವಿಭಾಗಾಧಿಕಾರಿಗಳು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪ್ರಸ್ತಾವನೆ ಸಂಖ್ಯೆ: ಸಿಸಿಎ9/2002-03, ದಿನಾಂಕ 18-3-2003.

2) ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ: ಕಂಇ 06 ಎಡಿಇ 2005, ದಿನಾಂಕ 15-12-2005.

3) ಸರ್ಕಾರದ ಆದೇಶ ಸಂಖ್ಯೆ: ಕಂಇ 06 ಎಡಿಇ 2004, ದಿನಾಂಕ 31-7-2008

4) ವಿಚಾರಣಾಧಿಕಾರಿಗಳಾದ ಶ್ರೀ ಟಿ. ಜೆ. ಮರಿಯಪ್ಪ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ ವಿಚಾರಣಾ ವರದಿ ದಿನಾಂಕ 17-1-2011.

**ಪ್ರಸ್ತಾವನೆ :**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಮರಳವಾಡಿ ಹೋಬಳಿ, ಜಕ್ಕಸಂದ್ರ ಗ್ರಾಮದ ಜೈನ್ ವಿದ್ಯಾ ಸಂಸ್ಥೆಯವರು ವಿವಿಧ ಸರ್ವೆ ನಂಬರುಗಳಲ್ಲಿ ಜಮೀನುಗಳನ್ನು ಖರೀದಿಸಿದ್ದು, ಈ ಖರೀದಿಯಲ್ಲಿ ಭೂ ಸುಧಾರಣಾ ಕಾಯ್ದೆ, ಭೂ ಮಂಜೂರಾತಿ ಕಾಯ್ದೆ ಹಾಗೂ ಪಿಟಿಸಿಎಲ್ ಕಾಯ್ದೆಗಳನ್ನು ಸ್ಪಷ್ಟವಾಗಿ ಉಲಂಘನೆ ಮಾಡಿ ಅಕ್ರಮ ಖಾತೆ ಬದಲಾವಣೆ ಮಾಡಿರುವ ಆಪಾದನೆಗೆ ಈ ಕೆಳಕಂಡ ಅಧಿಕಾರಿ/ನೌಕರರು ಸಿಲುಕಿರುತ್ತಾರೆಂದು ಇವರುಗಳ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳನ್ವಯ ಜಂಟಿ ಇಲಾಖಾ ವಿಚಾರಣೆ ಜರುಗಿಸಿ, ಶಿಸ್ತು ಕ್ರಮ ಕೈಗೊಳ್ಳಲು ಅನುಬಂಧ 1-4 ರವರೆಗೆ ಕರಡು ದೋಷಾರೋಪಣಾ ಪಟ್ಟಿಯನ್ನು ತಯಾರಿಸಿ ಸಂಬಂಧಪಟ್ಟ ದಾಖಲೆಗಳೊಂದಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ವಿಭಾಗಾಧಿಕಾರಿಗಳು, ಬೆಂಗಳೂರು ವಿಭಾಗ, ಬೆಂಗಳೂರು ರವರ ದಿನಾಂಕ 19-3-2003ರ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

1) ಶ್ರೀ ಎಸ್. ಸೀತಾರಾಮಯ್ಯ, ಹಿಂದಿನ ತಹಶೀಲ್ದಾರ್, ಕನಕಪುರ, ಪ್ರಸ್ತುತ ನಿವೃತ್ತ ಕೆ.ಎ.ಎಸ್. ಅಧಿಕಾರಿ
2) ಶ್ರೀ ಬಿ. ಹೆಚ್. ಶಿವಪ್ಪ, ಹಿಂದಿನ ಆರ್.ಆರ್.ಶಿರಸ್ತೇದಾರ್, ಕನಕಪುರ
3) ಶ್ರೀ ಶಿವಣ್ಣ ಶಾಸ್ತ್ರಿ, ಹಿಂದಿನ ರಾಜಸ್ವ ನಿರೀಕ್ಷಕರು, ಮರಳವಾಡಿ ವೃತ್ತ
4) ಶ್ರೀ ಜಿ. ಎಸ್. ರಾಜಣ್ಣ, ಹಿಂದಿನ ರಾಜಸ್ವ ನಿರೀಕ್ಷಕರು, ಮರಳವಾಡಿ ಕನಕಪುರ ತಾಲ್ಲೂಕು
5) ಶ್ರೀ ನಾರಾಯಣಗೌಡ, ಹಿಂದಿನ ಪ್ರಭಾರ ಗ್ರಾಮಲೆಕ್ಕಿಗರು, ದೊಡ್ಡಸಾತೇನಹಳ್ಳಿ
6) ಶ್ರೀ ಕೃಷ್ಣ, ಹಿಂದಿನ ಗ್ರಾಮಲೆಕ್ಕಿಗರು, ದೊಡ್ಡಸಾತೇನಹಳ್ಳಿ

ಸರ್ಕಾರವು ವಿಭಾಗಾಧಿಕಾರಿಗಳು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಮೇಲೆ ತಿಳಿಸಲಾದ ಕ್ರಮ ಸಂಖ್ಯೆ: 1 ರಿಂದ 6 ರವರೆಗಿನ ಅಧಿಕಾರಿ/ನೌಕರರ ಪೈಕಿ ಮೊದಲನೇ ಆರೋಪಿಯಾದ ಶ್ರೀ ಸೀತಾರಾಮಯ್ಯ, ಹಿಂದಿನ ತಹಶೀಲ್ದಾರ್ ಇವರು ದಿನಾಂಕ 31-7-2002 ರಂದು ಸೇವೆಯಿಂದ ವಯೋ ನಿವೃತ್ತಿ ಹೊಂದಿರುವುದರಿಂದ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮಗಳನ್ವಯ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿ ಶಿಸ್ತು ಕ್ರಮ ಕೈಗೊಳ್ಳಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲವಾದ್ದರಿಂದ, ಶ್ರೀ ಸೀತಾರಾಮಯ್ಯ, ಹಿಂದಿನ ತಹಶೀಲ್ದಾರ್ ಇವರ ವಿರುದ್ಧ ಸಿವಿಲ್ ದಾವೆ ಹೂಡಲು ಪ್ರತ್ಯೇಕವಾಗಿ ಕ್ರಮ ಕೈಗೊಳ್ಳಲು ಉದ್ದೇಶಿಸಿ, ಉಳಿದ ಕ್ರಮ ಸಂಖ್ಯೆ: 2 ರಿಂದ 6ರ ವರೆಗಿನ ಅಧಿಕಾರಿ/ನೌಕರರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11 ಜೊತೆಗೆ 13 ಗಳನ್ನೊಳಗೊಂಡಂತೆ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ದಿನಾಂಕ 15-12-2005ರ ಸರ್ಕಾರದ ಕಾರಣ ಕೇಳುವ ನೋಟೀಸಿನಲ್ಲಿ ಅನುಬಂಧ 1 ರಿಂದ 4 ದೋಷಾರೋಪಣಾ ಪಟ್ಟಿಯೊಂದಿಗೆ ಜಾರಿ ಮಾಡಲಾಗಿರುತ್ತದೆ.

ಸರ್ಕಾರದ ಕಾರಣ ಕೇಳುವ ನೋಟೀಸಿಗೆ ಮೇಲಿನ ಕ್ರಮ ಸಂಖ್ಯೆ: 2 ರಿಂದ 6 ರವರೆಗಿನ ಆರೋಪಿತರು ಸರ್ಕಾರಕ್ಕೆ ಲಿಖಿತ ಹೇಳಿಕೆ ನೀಡಿದ್ದು, ಅವರುಗಳು ತಮ್ಮ ವಿರುದ್ಧದ ಆಪಾದನೆಯನ್ನು ಅಲ್ಲಗಳೆದಿರುತ್ತಾರೆ. ಈ ಹಿನ್ನೆಲೆಯಲ್ಲಿ, ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ಸರ್ಕಾರದ ದಿನಾಂಕ 31-7-2008ರ ಆದೇಶದಲ್ಲಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಮರಳವಾಡಿ ಹೋಬಳಿ, ಜಕ್ಕಸಂದ್ರ ಗ್ರಾಮದ ಜೈನ್ ವಿದ್ಯಾ ಸಂಸ್ಥೆಯವರು ವಿವಿಧ ಸರ್ವೆ ನಂಬರುಗಳಲ್ಲಿ ಜಮೀನುಗಳನ್ನು ಖರೀದಿಸಿದ್ದು, ಈ ಖರೀದಿಯಲ್ಲಿ ಭೂ ಸುಧಾರಣಾ ಕಾಯ್ದೆ, ಭೂ ಮಂಜೂರಾತಿ ಕಾಯ್ದೆ ಹಾಗೂ ಪಿಟಿಸಿಎಲ್ ಕಾಯ್ದೆಗಳನ್ನು ಸ್ಪಷ್ಟವಾಗಿ ಉಲ್ಲಂಘನೆ ಮಾಡಿ ಅಕ್ರಮ ಖಾತೆ ಬದಲಾವಣೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಈ ಕೆಳಕಂಡ ಅಧಿಕಾರಿ/ನೌಕರರ ವಿರುದ್ಧದ ಆಪಾದನೆಗೆ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11 ಜೊತೆಗೆ 13 ಗಳನ್ನೊಳಗೊಂಡಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಇಲಾಖಾ ವಿಚಾರಣೆ ಜರುಗಿಸಲು, ಶ್ರೀ ಟಿ. ಜೆ. ಮರಿಯಪ್ಪ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾಧಿಕಾರಿಗಳ ಕಚೇರಿಯ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು.

1) ಶ್ರೀ ಬಿ. ಹೆಚ್. ಶಿವಪ್ಪ, ಹಿಂದಿನ ಆರ್.ಆರ್.ಶಿರಸ್ತೇದಾರ್, ಕನಕಪುರ
2) ಶ್ರೀ ಶಿವಣ್ಣ ಶಾಸ್ತ್ರಿ, ಹಿಂದಿನ ರಾಜಸ್ವ ನಿರೀಕ್ಷಕರು, ಮರಳವಾಡಿ ವೃತ್ತ
3) ಶ್ರೀ ಜಿ. ಎಸ್. ರಾಜಣ್ಣ, ಹಿಂದಿನ ರಾಜಸ್ವ ನಿರೀಕ್ಷಕರು, ಮರಳವಾಡಿ ಕನಕಪುರ ತಾಲ್ಲೂಕು
4) ಶ್ರೀ ನಾರಾಯಣಗೌಡ, ಹಿಂದಿನ ಪ್ರಭಾರ ಗ್ರಾಮಲೆಕ್ಕಿಗರು, ದೊಡ್ಡಸಾತೇನಹಳ್ಳಿ
5) ಶ್ರೀ ಕೃಷ್ಣ, ಹಿಂದಿನ ಗ್ರಾಮಲೆಕ್ಕಿಗರು, ದೊಡ್ಡಸಾತೇನಹಳ್ಳಿ

ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ದಿನಾಂಕ 17–1–2011ರ ವಿಚಾರಣಾ ವರದಿಯಲ್ಲಿ ವಿಚಾರಣಾಧಿಕಾರಿಗಳು ಸರ್ಕಾರದ ಆದೇಶದಂತೆ, ಕೂಲಂಕಷವಾಗಿ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವರದಿಯಲ್ಲಿ, ಕನಕಪುರ ತಾಲ್ಲೂಕಿನ ಜಕ್ಕಸಂದ್ರ ಗ್ರಾಮದ ಕೆಲವು ವ್ಯವಸಾಯದ ಜಮೀನುಗಳನ್ನು ಜೈನ್ ವಿದ್ಯಾ ಸಂಸ್ಥೆಯು ಯಾವ ಜಮೀನನ್ನು ಖರೀದಿ ಮಾಡಿರುವುದಿಲ್ಲ, ಆರೋಪದಲ್ಲಿ ನಮೂದಿಸಿರುವ ಜಮೀನುಗಳನ್ನು ಖರೀದಿಸಿರುವವರು ಬೇರೆ ಬೇರೆ ವ್ಯಕ್ತಿಗಳಾಗಿದ್ದು, ಅವರೆಲ್ಲರೂ ಖರೀದಿ ಮಾಡುವ ಸಮಯದಲ್ಲಿ ಕೃಷಿಕರಾಗಿದ್ದು ಅಥವಾ ಕೃಷಿಕ ಕುಟುಂಬಕ್ಕೆ ಸೇರಿದವರಾಗಿದ್ದರು ಎಂಬುದಕ್ಕೆ ದಾಸ್ತಾವೇಜುಗಳನ್ನು ಹಾಜರು ಪಡಿಸಿದ್ದು, ಆದ್ದರಿಂದ, ಸದರಿ ಖರೀದಿಗಳು ಭೂ ಸುಧಾರಣಾ ಕಾಯ್ದೆ ಕಲಂ 79(ಎ)ನ್ನು ಉಲ್ಲಂಘಿಸಿರುವುದಿಲ್ಲ ಮತ್ತು ಮ್ಯುಟೇಷನ್ ಅಂಗೀಕರಿಸಿರುವುದರಲ್ಲಿ ಯಾವುದೇ ಕರ್ತವ್ಯ ಲೋಪವಾಗಿರುವುದಿಲ್ಲ. ಸರ್ಕಾರದಿಂದ ಮಂಜೂರಾದ ಭೂಮಿಗಳ ಬಗ್ಗೆ ನಿಯಮಾವಳಿಯನ್ವಯ ವಿಧಿಸಿದ್ದ ಪರಭಾರೆ ಮಾಡಬಾರದೆಂಬ ಅವಧಿಯು ಮುಗಿದ ನಂತರ ಸದರಿ ಜಮೀನುಗಳನ್ನು ಖರೀದಿ ಮಾಡಲಾಗಿದ್ದು, ಇದರಿಂದ ಭೂ ಮಂಜೂರಾತಿ ನಿಯಮಗಳನ್ನು ಉಲ್ಲಂಘಿಸಿ ಖರೀದಿ ಮಾಡಿರುವುದಿಲ್ಲ ಜೈನ್ ವಿದ್ಯಾ ಸಂಸ್ಥೆಯೊಂದಿಗೆ ಆರೋಪಿತರು ಶಾಮೀಲಾಗಿರುತ್ತಾರೆಂಬುದು ನಿರಾಧಾರವಾಗಿದ್ದು ಮತ್ತು ಸತ್ಯಕ್ಕೆ ದೂರವಾಗಿರುತ್ತದೆ. ಮ್ಯುಟೇಷನ್ ರಿಜಿಸ್ಟರ್ ನಕಲುಗಳನ್ನು ಪರಿಶೀಲಿಸಿದಾಗ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ಸರ್ವೆ ನಂಬರುಗಳನ್ನು ಬೇರೆ ಬೇರೆ ವ್ಯಕ್ತಿಗಳು ಖರೀದಿ ಮಾಡಿರುವುದು ಕಂಡು ಬರುತ್ತದೆ. ರಾಮನಗರ ಉಪ ವಿಭಾಗಾಧಿಕಾರಿಗಳು ಮಾಡಿರುವ ಆದೇಶಗಳಲ್ಲಿ ಈ ಪ್ರಕರಣದಲ್ಲಿ ಭೂ ಸುಧಾರಣಾ ಕಾಯ್ದೆ ಕಲಂ 79(ಎ) ಮತ್ತು (ಬಿ) ಅನ್ವಯ ತಮಗೆ ಇರುವ ಅಧಿಕಾರವನ್ನು ಚಲಾಯಿಸಿ ಮಾಡಿದ ಆದೇಶಗಳಾಗಿದ್ದು, ಈ ಎಲ್ಲಾ ಆದೇಶಗಳಲ್ಲಿಯೂ ಭೂ ಸುಧಾರಣಾ ಕಾಯ್ದೆಯನ್ನಾಗಲೀ, ಭೂ ಮಂಜೂರಾತಿ ನಿಯಮಗಳನ್ನಾಗಲೀ, ಕೆ.ಪಿ.ಟಿ.ಸಿ.ಎಲ್. ಕಾಯ್ದೆಗಳನ್ನಾಗಲೀ ಉಲ್ಲಂಘಿಸಿರುವುದಿಲ್ಲವೆಂದು ಆದೇಶ ಮಾಡಿರುತ್ತಾರೆ. ಈ ಆದೇಶಗಳ ವಿರುದ್ಧ ಕಾನೂನು ಪ್ರಕಾರ ಅಪೀಲು ದಾಖಲು ಮಾಡಿರುವುದಿಲ್ಲ. ಹೀಗಾಗಿ ಈ ಆದೇಶಗಳು ಅಂತಿಮ ಆದೇಶಗಳಾಗಿದ್ದು ಆರೋಪಿತರ ಮೇಲೆ ಆರೋಪಗಳನ್ನು ಹೊರಿಸಿರುವುದೇ ನ್ಯಾಯಯುತವಾಗಿರುವುದಿಲ್ಲ. ಆರೋಪಿತರೆಲ್ಲರೂ ಸಾಕ್ಷ್ಯ ನೀಡಿ ಈ ಪ್ರಕರಣದಲ್ಲಿ ಅಂಗೀಕರಿಸಿರುವ ಮ್ಯುಟೇಷನ್‌ಗಳು ಕಾನೂನು ಬದ್ಧವಾಗಿದ್ದು, ಅವರುಗಳು ಯಾವುದೇ ಕಾಯ್ದೆ ಅಥವಾ ನಿಯಮಗಳನ್ನು ಉಲ್ಲಂಘಿಸಿರುವುದಿಲ್ಲವೆಂದು ಹೇಳಿಕೆ ನೀಡಿದ್ದು, ಇದರಿಂದ ಶಿಸ್ತು ಪ್ರಾಧಿಕಾರದ ಪರವಾಗಿ ಹಾಜರುಪಡಿಸಿರುವ ದಸ್ತಾವೇಜುಗಳು ಸಮರ್ಥಿಸುತ್ತದೆ ಮತ್ತು ಆರೋಪಿತರ ಸಾಕ್ಷ್ಯವನ್ನು ನಂಬದೆ ಇರಲು ಎಳ್ಳಷ್ಟು ಕಾರಣವಿರುವುದಿಲ್ಲ. ಈ ಎಲ್ಲಾ ಕಾರಣಗಳಿಂದ ಆರೋಪಿತರ ಮೇಲೆ ಹೊರಿಸಿರುವ ಎಲ್ಲಾ ಆರೋಪಗಳು ರುಜುವಾತು ಆಗಿರುವುದಿಲ್ಲ. ಆದ್ದರಿಂದ ಆರೋಪಿತರು ದೋಷಮುಕ್ತರಾಗಲು ಅರ್ಹರಾಗಿರುತ್ತಾರೆ ಎಂದು ವರದಿ ಮಾಡಿರುತ್ತಾರೆ.

ವಿಚಾರಣಾಧಿಕಾರಿಗಳು ಸಲ್ಲಿಸಿರುವ ವರದಿಯಲ್ಲಿ ಮೇಲಿನ ಆರೋಪಿತರ ವಿರುದ್ಧದ ಆರೋಪಗಳು ರುಜುವಾತಾಗಿರುವುದಿಲ್ಲವೆಂದು ಮತ್ತು ಅವರನ್ನು ದೋಷಮುಕ್ತ ಮಾಡಲು ಅರ್ಹರಾಗಿರುತ್ತಾರೆಂದು ತಿಳಿಸಿರುವ ಹಿನ್ನೆಲೆಯಲ್ಲಿ, ವಿಚಾರಣಾಧಿಕಾರಿಗಳ ವರದಿಯನ್ನು ಸರ್ಕಾರವು ಒಪ್ಪಿ, ಶ್ರೀ ಬಿ. ಹೆಚ್. ಶಿವಪ್ಪ, ಹಿಂದಿನ ಆರ್. ಆರ್. ಶಿರಸ್ತೇದಾರ್, ಕನಕಪುರ ಮತ್ತು ಇತರರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಡಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 6 ಎಡಿಇ 2004, ಬೆಂಗಳೂರು, ದಿನಾಂಕ: 18–02–2011**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ವಿಚಾರಣಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿರುವ ವಿಚಾರಣಾ ವರದಿಯನ್ನು ಒಪ್ಪಿ, ಸರ್ಕಾರವು ಈ ಕೆಳಕಂಡ 5 ಜನ ಅಧಿಕಾರಿ/ನೌಕರರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಆದೇಶಿಸಿದೆ.

1) ಶ್ರೀ ಬಿ. ಹೆಚ್. ಶಿವಪ್ಪ, ಹಿಂದಿನ ಆರ್.ಆರ್.ಶಿರಸ್ತೇದಾರ್, ಕನಕಪುರ ಹಾಲಿ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಚೇರಿ, ಚಿಕ್ಕಬಳ್ಳಾಪುರ ಜಿಲ್ಲೆ.
2) ಶ್ರೀ ಶಿವಣ್ಣ ಶಾಸ್ತ್ರಿ, ಹಿಂದಿನ ರಾಜಸ್ವ ನಿರೀಕ್ಷಕರು, ಮರಳವಾಡಿ ವೃತ್ತ, ಹಾಲಿ ರಾಜಸ್ವ ನಿರೀಕ್ಷಕರು, ವಿರೂಪಾಕ್ಷಪುರ ಹೋಬಳಿ, ಚನ್ನಪಟ್ಟಣ ತಾಲ್ಲೂಕು.
3) ಶ್ರೀ ಜಿ. ಎಸ್. ರಾಜಣ್ಣ, ಹಿಂದಿನ ರಾಜಸ್ವ ನಿರೀಕ್ಷಕರು, ಮರಳವಾಡಿ ಕನಕಪುರ ತಾಲ್ಲೂಕು ಹಾಲಿ ನಿವೃತ್ತರು ಆನೇಕಲ್ ಟೌನ್.
4) ಶ್ರೀ ನಾರಾಯಣಗೌಡ, ಹಿಂದಿನ ಪ್ರಭಾರ ಗ್ರಾಮಲೆಕ್ಕಿಗರು, ದೊಡ್ಡಸಾತೇನಹಳ್ಳಿ ಹಾಲಿ ಗ್ರಾಮಲೆಕ್ಕಿಗರು, ರಾಮನಗರ ತಾಲ್ಲೂಕು ಕಚೇರಿ.
5) ಶ್ರೀ ಕೃಷ್ಣ, ಹಿಂದಿನ ಗ್ರಾಮಲೆಕ್ಕಿಗರು, ದೊಡ್ಡಸಾತೇನಹಳ್ಳಿ ಹಾಲಿ ಗ್ರಾಮಲೆಕ್ಕಿಗರು, ಕನಕಪುರ ಟೌನ್

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. ನಂ. 512

## ಕಂದಾಯ ಸಚಿವಾಲಯ

**ವಿಷಯ** : ಶ್ರೀ ಆರ್. ಡಿ. ಪಾಟೀಲ್, ಹಿಂದಿನ ತಹಶೀಲ್ದಾರ್, ಚಿಕ್ಕೋಡಿ ಪ್ರಸ್ತುತ ನಿವೃತ್ತರು ಇವರ ವಿರುದ್ಧ ಇಲಾಖಾ ವಿಚಾರಣೆ ಅಂತಿಮ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ: ಕಂಇ 02 ಎಡಿಇ 2009, ದಿನಾಂಕ 30–4–2009

2) ಉಪಲೋಕಾಯುಕ್ತರು, ಕರ್ನಾಟಕ, ಬೆಂಗಳೂರು ರವರ ಪತ್ರ ಸಂಖ್ಯೆ: LOK/ARE-4/Enq-19/2009, ದಿನಾಂಕ 1–12–2010ರ ಪತ್ರ ಹಾಗೂ ವಿಚಾರಣಾ ವರದಿ ದಿನಾಂಕ 29–3–2010.

**ಪ್ರಸ್ತಾವನೆ :**

ಉಪ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಚಿಕ್ಕೋಡಿ ತಾಲ್ಲೂಕಿನ ಅಂದಿನ ತಹಶೀಲ್ದಾರರಾದ ಶ್ರೀ ಆರ್. ಡಿ. ಪಾಟೀಲ್ ಇವರ ವಿರುದ್ಧ ಶ್ರೀ ಮಾಳಪ್ಪ ಸಿದ್ರಾಮ ಹಡಕಲ್ ಇವರು ಮಾನ್ಯ ಲೋಕಾಯುಕ್ತರಿಗೆ ಸಲ್ಲಿಸಿರುವ ದೂರಿನ ಬಗ್ಗೆ ಪ್ರಾಥಮಿಕ ವಿಚಾರಣೆ ನಡೆಸಿ, ಮಾನ್ಯ ಉಪ ಲೋಕಾಯುಕ್ತರು ನೀಡಿರುವ ವರದಿಯನ್ನು ಕಳುಹಿಸಿ, ವರದಿಯ ಬಗ್ಗೆ ಕ್ರಮ ಕೈಗೊಳ್ಳುವಂತೆ ತಿಳಿಸಿದ್ದು, ಅದರಂತೆ ಪರಿಶೀಲಿಸಲಾಗಿ, ಅರ್ಜಿದಾರರಾದ ಶ್ರೀ ಮಾಳಪ್ಪ ಸಿದ್ರಾಮ ಹಡಕರ್ ಇವರು ಶ್ರೀ ಚೇತನ್ ಈರಣ್ಣ ಸ್ವಾಮಿ ಇವರು ಶಾಲಾ ದಾಖಲಾತಿ ಪ್ರಕಾರ ಹಿಂದು–ಲಿಂಗಾಯಿತ

ಜಾತಿಗೆ ಸೇರಿದವರಾಗಿದ್ದು, ಜಿಲ್ಲಾ ಪರಿಷತ್ ಚುನಾವಣೆ ಸಂದರ್ಭದಲ್ಲಿ ಹಿಂದು-ಗುರುವ ಜಾತಿಗೆ ಸೇರಿದವರೆಂದು ಸುಳ್ಳು ಜಾತಿ ದೃಢೀಕರಣ ಪತ್ರವನ್ನು ನೀಡಲಾಗಿದ್ದು, ಈ ರೀತಿ ಜಾತಿ ಪ್ರಮಾಣ ಪತ್ರದ ಬಗ್ಗೆ ವಿಚಾರಣೆ ಮಾಡದೇ ಖೋಟಾ ಸರ್ಟಿಫಿಕೇಟ್ ನೀಡಿರುವುದು ಮೇಲ್ನೋಟಕ್ಕೆ ಕಂಡು ಬಂದಿದ್ದರಿಂದ, ಈ ರೀತಿ ಕರ್ತವ್ಯಚ್ಯುತಿ ಎಸಗಿರುವ ಅಧಿಕಾರಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಮಾನ್ಯ ಉಪ ಲೋಕಾಯುಕ್ತರು ಕರ್ನಾಟಕ ಲೋಕಾಯುಕ್ತ ಕಾಯ್ದೆ ಅಧಿನಿಯಮ 12(3) ರನ್ವಯ ಶಿಫಾರಸ್ಸು ಮಾಡಿದ್ದನ್ನು ಸರ್ಕಾರವು ಪರಿಶೀಲಿಸಿ, ಶ್ರೀ ಆರ್. ಡಿ. ಪಾಟೀಲ್, ಹಿಂದಿನ ತಹಶೀಲ್ದಾರ್, ಚಿಕ್ಕೋಡಿ ಪ್ರಸ್ತುತ ನಿವೃತ್ತರು ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1957ರ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರದಂತೆ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳ ನಿಯಮ 11ಎ ರನ್ವಯ ಕೂಲಂಕಷವಾಗಿ ವಿಚಾರಣೆ ನಡೆಸುವ ಸಲುವಾಗಿ, ಸದರಿ ನಿಯಮಾವಳಿಯ ನಿಯಮ 14(ಎ) ರಡಿಯಲ್ಲಿ ವಿಚಾರಣೆ ಕೈಗೊಳ್ಳಲು ಮಾನ್ಯ ಉಪ ಲೋಕಾಯುಕ್ತರು, ಬೆಂಗಳೂರು ಇವರಿಗೆ ವಹಿಸಿ ಆದೇಶಿಸಲಾಗಿರುತ್ತದೆ.

ಸರ್ಕಾರದ ಆದೇಶದಂತೆ, ಅಪರ ನಿಬಂಧಕರು ವಿಚಾರಣೆ-4, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರು ವಿಚಾರಣೆ ನಡೆಸಿ, ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ದಿನಾಂಕ 29-3-2010ರ ವರದಿಯಲ್ಲಿ, ಶ್ರೀ ಆರ್. ಡಿ. ಪಾಟೀಲ್, ಹಿಂದಿನ ತಹಶೀಲ್ದಾರ್, ಚಿಕ್ಕೋಡಿ ಪ್ರಸ್ತುತ ನಿವೃತ್ತ ಇವರ ವಿರುದ್ಧದ ಆರೋಪಗಳು ಸಾಬೀತಾಗಿರುವುದಿಲ್ಲ ಎಂದು ತಿಳಿಸಿರುವ ಹಿನ್ನೆಲೆಯಲ್ಲಿ, ಸದರಿ ವರದಿಯನ್ನು ಒಪ್ಪಿ, ಈ ಪ್ರಕರಣವನ್ನು ಕೈಬಿಡುವಂತೆ ಮಾನ್ಯ ಉಪ ಲೋಕಾಯುಕ್ತರು ಸರ್ಕಾರಕ್ಕೆ ತಿಳಿಸಿರುತ್ತಾರೆ.

ಮಾನ್ಯ ಉಪ ಲೋಕಾಯುಕ್ತರು, ಶ್ರೀ ಆರ್. ಡಿ. ಪಾಟೀಲ್, ಹಿಂದಿನ ತಹಶೀಲ್ದಾರ್, ಚಿಕ್ಕೋಡಿ ಪ್ರಸ್ತುತ ನಿವೃತ್ತ ಇವರ ವಿರುದ್ಧದ ಆರೋಪಗಳು ಸಾಬೀತಾಗಿರುವುದಿಲ್ಲ ಎಂದು ತಿಳಿಸಿ, ಈ ಪ್ರಕರಣವನ್ನು ಕೈಬಿಡುವಂತೆ ತಿಳಿಸಿರುವ ಹಿನ್ನೆಲೆಯಲ್ಲಿ, ಮಾನ್ಯ ಉಪ ಲೋಕಾಯುಕ್ತರ ದಿನಾಂಕ 1-12-2010ರ ವರದಿಯನ್ನು ಸರ್ಕಾರವು ಒಪ್ಪಿ ಶ್ರೀ ಆರ್. ಡಿ. ಪಾಟೀಲ್, ಹಿಂದಿನ ತಹಶೀಲ್ದಾರ್, ಚಿಕ್ಕೋಡಿ ಪ್ರಸ್ತುತ ನಿವೃತ್ತ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 2 ಎಡಿಇ 2009, ಬೆಂಗಳೂರು, ದಿನಾಂಕ: 15-02-2011**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಆರ್. ಡಿ. ಪಾಟೀಲ್, ಹಿಂದಿನ ತಹಶೀಲ್ದಾರ್, ಚಿಕ್ಕೋಡಿ ಪ್ರಸ್ತುತ ನಿವೃತ್ತ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು-3)

ಪಿ.ಆರ್. ನಂ. 513

## ಶಿಕ್ಷಣ ಸಚಿವಾಲಯ

**ವಿಷಯ** : ಮೈಸೂರಿನ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯಕ್ಕೆ ಮೈಸೂರು ವಿಶ್ವವಿದ್ಯಾಲಯದ ಜಮೀನನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ** :
1) ಸರ್ಕಾರದ ಆದೇಶ ಸಂಖ್ಯೆ: ಇಡಿ 6 ಯುಓವಿ 1996, ದಿನಾಂಕ 05-07-1996
2) ಸರ್ಕಾರದ ಆದೇಶ ಸಂಖ್ಯೆ: ಇಡಿ 2 ಯುಓವಿ 1996, ದಿನಾಂಕ 28-05-1997
3) ದಿನಾಂಕ 25-09-2010ರಂದು ಪ್ರಧಾನ ಕಾರ್ಯದರ್ಶಿಗಳು (ಉನ್ನತ ಶಿಕ್ಷಣ) ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ :**

1992ರ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯದ ಅಧಿನಿಯಮದನ್ವಯ ಮೈಸೂರು ವಿಶ್ವವಿದ್ಯಾಲಯದ ಅಂಚೆ ತೆರಪಿನ ಶಿಕ್ಷಣ ಸಂಸ್ಥೆಯನ್ನು ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯವನ್ನಾಗಿ ಪರಿವರ್ತಿಸಲಾಗಿದೆ. ಈ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯಕ್ಕೆ ಮೇಲೆ (1)ರಲ್ಲಿ ಓದಲಾದ ದಿನಾಂಕ 05-07-1996ರ ಸರ್ಕಾರಿ ಆದೇಶದಲ್ಲಿ ಮೈಸೂರು ವಿಶ್ವವಿದ್ಯಾಲಯದ ಆವರಣದಲ್ಲಿನ 50 ಎಕರೆ ವಿಸ್ತೀರ್ಣದ ಜಮೀನನ್ನು ಮುಕ್ತ ವಿಶ್ವವಿದ್ಯಾಲಯಕ್ಕೆ ಹಸ್ತಾಂತರಿಸಿ ಆದೇಶಿಸಲಾಗಿತ್ತು. ಅದರಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ 28-05-1997ರ ಸರ್ಕಾರಿ ಆದೇಶದಲ್ಲಿ ಸದರಿ 50 ಎಕರೆ ವಿಸ್ತೀರ್ಣ ಜಮೀನನ್ನು ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯಕ್ಕೆ ವರ್ಗಾಯಿಸಿ ಆದೇಶಿಸಲಾಗಿದೆ ಹಾಗೂ ಮೈಸೂರು ವಿಶ್ವವಿದ್ಯಾಲಯಕ್ಕೆ ಈ ಜಮೀನನ್ನು ಮುಕ್ತ ವಿಶ್ವವಿದ್ಯಾಲಯಕ್ಕೆ ಹಸ್ತಾಂತರಿಸಲು ಕ್ರಮ ವಹಿಸುವಂತೆ ಸೂಚಿಸಲಾಗಿತ್ತು.

ಈ ಜಮೀನಿನ ಹಸ್ತಾಂತರ ವಿಷಯದಲ್ಲಿ ಎರಡೂ ವಿಶ್ವವಿದ್ಯಾಲಯಗಳು ಪರಸ್ಪರ ವಿಚಾರವಿನಿಮಯ ನಡೆಸಿದ್ದು, ಮೈಸೂರು ವಿಶ್ವವಿದ್ಯಾಲಯವು 50 ಎಕರೆ ಜಮೀನನ್ನು ಮುಕ್ತ ವಿಶ್ವವಿದ್ಯಾಲಯಕ್ಕೆ ಹಸ್ತಾಂತರಿಸದೇ ಇರುವುದು ಕಂಡುಬಂದಿದೆ. ಈ ವಿಷಯದಲ್ಲಿ ಹಲವಾರು ಸಮಾಲೋಚನೆ ನಂತರ ಮೈಸೂರು ವಿಶ್ವವಿದ್ಯಾಲಯವು ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯಕ್ಕೆ ಹಸ್ತಾಂತರಿಸಬೇಕಾದ 50 ಎಕರೆ ಜಮೀನಿನಲ್ಲಿ ಕೇವಲ 12.18 ಎಕರೆ ಜಮೀನನ್ನು ಮಾತ್ರ ಭೌತಿಕವಾಗಿ ಹಸ್ತಾಂತರಿಸಿದ್ದು, ಮತ್ತೊಮ್ಮೆ 3.19 ಎಕರೆ ಜಮೀನನ್ನು ಮುಕ್ತ ವಿಶ್ವವಿದ್ಯಾಲಯಕ್ಕೆ ಹಸ್ತಾಂತರಿಸಿದೆ. ಆದುದರಿಂದ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯಕ್ಕೆ ಮೈಸೂರು ವಿಶ್ವವಿದ್ಯಾಲಯವು ಒಟ್ಟು ಕೇವಲ 14.18 ಎಕರೆ ಜಮೀನನ್ನು ಮಾತ್ರ ಬಿಟ್ಟುಕೊಟ್ಟಂತಾಗಿದೆ. ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯವು ಒಟ್ಟು ಕೇವಲ 14.18 ಎಕರೆ ಪ್ರದೇಶದಲ್ಲಿ ವಿಶ್ವವಿದ್ಯಾಲಯದ ಚಟುವಟಿಕೆಯನ್ನು ಮತ್ತು ವಿಶ್ವವಿದ್ಯಾಲಯಕ್ಕೆ ಬೇಕಾದ ಮೂಲ ಸೌಕರ್ಯಗಳಾದ ಕಟ್ಟಡಗಳು, ಹಾಸ್ಟೆಲುಗಳನ್ನು ನಿರ್ವಹಿಸಲು ಸಾಧ್ಯವಾಗುತ್ತಿಲ್ಲ. ಈ ಹಿನ್ನೆಲೆಯಲ್ಲಿ ಮುಕ್ತ ವಿಶ್ವವಿದ್ಯಾಲಯವು ಕೋರಿಕೆಯಂತೆ ಇನ್ನೂ ಹೆಚ್ಚಿನ ಜಮೀನನ್ನು ಹಸ್ತಾಂತರಿಸುವಂತೆ ಮೈಸೂರು ವಿಶ್ವವಿದ್ಯಾಲಯವನ್ನು ಕೋರುವ ಬಗ್ಗೆ ಮತ್ತು ಈ ಬಗ್ಗೆ ವಿವರವಾಗಿ ಚರ್ಚಿಸಿ ಇತ್ಯರ್ಥಕ್ಕೆ ಬರುವ ಬಗ್ಗೆ ದಿನಾಂಕ 25-09-2010ರಂದು ಸಭೆಯನ್ನು ಕರೆಯಲಾಗಿತ್ತು. ಸದರಿ ಸಭೆಯಲ್ಲಿ ವಿಶ್ವವಿದ್ಯಾಲಯದ ವಾತಾವರಣದಲ್ಲಿ ಒಂದು

ವಿಶ್ವವಿದ್ಯಾಲಯದ ಬೆಳವಣಿಗೆಗಾಗಿ ಅದಕ್ಕೆ ಅಗತ್ಯವಿರುವ ಜಮೀನನ್ನು ಬಿಟ್ಟುಕೊಡುವಂತೆ ಮೈಸೂರು ವಿಶ್ವವಿದ್ಯಾಲಯವನ್ನು ಕೋರಲಾಯಿತು. ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯಕ್ಕೆ ಮಂಜೂರಾದ 50 ಎಕರೆ ಜಮೀನಿನ ಮುಂಭಾಗದಲ್ಲಿರುವ 34 ಎಕರೆ ಜಮೀನನ್ನು ಬಿಟ್ಟು ಕೊಡುವ ಬಗ್ಗೆ ವಿಶ್ವವಿದ್ಯಾಲಯದ ಬೆಳವಣಿಗೆಗಾಗಿ ಅವಶ್ಯಕವೆಂದು ತಿಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಪ್ರಧಾನ ಕಾರ್ಯದರ್ಶಿಗಳು ಎರಡೂ ವಿಶ್ವವಿದ್ಯಾಲಯಗಳಿಗೆ ತೊಂದರೆಯಾಗದಂತೆ ಒಂದು ಸೌಹಾರ್ದ ತಳಹದಿಯಲ್ಲಿ ಪ್ರಸ್ತುತ ಮುಕ್ತ ವಿಶ್ವವಿದ್ಯಾಲಯದ ಕಟ್ಟಡಕ್ಕೆ ಹೊಂದಿಕೊಂಡಿರುವ ಭಾಗದಲ್ಲಿ ಮುಕ್ತ ವಿಶ್ವವಿದ್ಯಾಲಯಕ್ಕೆ ಈ ಕೆಳಕಂಡಂತೆ ಜಮೀನು ಹಂಚಿಕೆ ಮಾಡುವ ಬಗ್ಗೆ ಪರಿಶೀಲಿಸಿ ಪ್ರಧಾನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇವರು ದಿನಾಂಕ 22–01–2011ರಂದು ಮೈಸೂರು ವಿಶ್ವವಿದ್ಯಾಲಯ ಮತ್ತು ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯಗಳ ಇಬ್ಬರು ಕುಲಪತಿಗಳು ಹಾಗೂ ಕುಲಸಚಿವರು ಹಾಗೂ ಇನ್ನಿತರೆ ಹಿರಿಯ ಅಧಿಕಾರಿಗಳನ್ನೊಳಗೊಂಡ ತಂಡದೊಂದಿಗೆ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯಕ್ಕೆ ನೀಡಬಹುದಾದ ಜಮೀನನ್ನು ಪರಿಶೀಲಿಸಲಾಗಿ, ಇಬ್ಬರು ಕುಲಪತಿಗಳು ಈ ಕೆಳಕಂಡಂತೆ ಜಮೀನನ್ನು ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯಕ್ಕೆ ನೀಡುವ ಬಗ್ಗೆ ಸೌಹಾರ್ದಯುತವಾಗಿ ಅನುಮೋದಿಸಿರುತ್ತಾರೆ.

**ಜಮೀನು ವಿವರ:–**

**ಬ್ಲಾಕ್– I ಎ.ಗು.00.38.10**

| | | |
|---|---|---|
| ಉತ್ತರಕ್ಕೆ | – | ಮೈಸೂರು–ಹುಣಸೂರು ಮುಖ್ಯರಸ್ತೆ |
| ದಕ್ಷಿಣಕ್ಕೆ | – | ಹಾಲಿ ಇರುವ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯದ ಜಮೀನು |
| ಪೂರ್ವ | – | ಹುಣಸೂರು ರಸ್ತೆಯ ಲಿಂಕ್ ರಸ್ತೆ |
| ಪಶ್ಚಿಮ | – | ಮೈಸೂರು ವಿಶ್ವವಿದ್ಯಾಲಯದ ಮುದ್ರಣ ವಿಭಾಗ |

**ಬ್ಲಾಕ್– II ಎ.ಗು.13.14.90**

| | | |
|---|---|---|
| ಉತ್ತರಕ್ಕೆ | – | ಮೈಸೂರು–ಹುಣಸೂರು ಮುಖ್ಯರಸ್ತೆ–ಪೆಟ್ರೋಲ್ ಬಂಕ್ |
| ದಕ್ಷಿಣಕ್ಕೆ | – | ಪ್ರಸ್ತಾಪಿತ ಮೈಸೂರು ವಿಶ್ವವಿದ್ಯಾಲಯದ ಮಹಿಳಾ ಹಾಸ್ಟೆಲ್ |
| ಪೂರ್ವ | – | ಪ್ರಸ್ತಾಪಿತ I.O.E. ಕಟ್ಟಡ |
| ಪಶ್ಚಿಮ | – | ಹುಣಸೂರು ರಸ್ತೆ ಲಿಂಕ್ ರಸ್ತೆ ಮತ್ತು ಹಾಲಿ ಇರುವ |
| | – | ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯದ ಕಟ್ಟಡ/ಜಮೀನು |

ಒಟ್ಟು 14.13 ಗುಂಟೆ ಜಮೀನು

ಅದರಂತೆ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯಕ್ಕೆ ಮೇಲ್ಕಂಡಂತೆ ಮೈಸೂರು ವಿಶ್ವವಿದ್ಯಾಲಯದ ಆವರಣದಲ್ಲಿನ ಜಮೀನು ಮಂಜೂರು ಮಾಡುವ ಬಗ್ಗೆ ತೀರ್ಮಾನಿಸಿ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 290 ಯುಎನ್ಇ 2010, ಬೆಂಗಳೂರು, ದಿನಾಂಕ: 18–02–2011**

ಮೇಲ್ಕಂಡ ಸಂದರ್ಭದಲ್ಲಿ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯಕ್ಕೆ ಮೈಸೂರು ವಿಶ್ವವಿದ್ಯಾಲಯದ ಆವರಣದಲ್ಲಿ ಈ ಕೆಳಕಂಡಂತೆ ಚಕ್ಕುಬಂದಿ ಹೊಂದಿರುವ ಒಟ್ಟು 14.13 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ರ ಸೆಕ್ಷನ್ 3(4)ರಡಿಯಲ್ಲಿ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯಕ್ಕೆ ಹಸ್ತಾಂತರಿಸಲು ಈ ಮೂಲಕ ಅನುಮೋದಿಸಿ ಹಸ್ತಾಂತರಿಸಲು ಆದೇಶಿಸಲಾಗಿದೆ.

**ಜಮೀನು ವಿವರ:–**

**ಬ್ಲಾಕ್– I ಎ.ಗು.00.38.10**

| | | |
|---|---|---|
| ಉತ್ತರಕ್ಕೆ | – | ಮೈಸೂರು–ಹುಣಸೂರು ಮುಖ್ಯರಸ್ತೆ |
| ದಕ್ಷಿಣಕ್ಕೆ | – | ಹಾಲಿ ಇರುವ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯದ ಜಮೀನು |
| ಪೂರ್ವ | – | ಹುಣಸೂರು ರಸ್ತೆಯ ಲಿಂಕ್ ರಸ್ತೆ |
| ಪಶ್ಚಿಮ | – | ಮೈಸೂರು ವಿಶ್ವವಿದ್ಯಾಲಯದ ಮುದ್ರಣ ವಿಭಾಗ |

**ಬ್ಲಾಕ್– II ಎ.ಗು.13.14.90**

| | | |
|---|---|---|
| ಉತ್ತರಕ್ಕೆ | – | ಮೈಸೂರು–ಹುಣಸೂರು ಮುಖ್ಯರಸ್ತೆ–ಪೆಟ್ರೋಲ್ ಬಂಕ್ ಜಾಗ |
| ದಕ್ಷಿಣಕ್ಕೆ | – | ಪ್ರಸ್ತಾಪಿತ ಮೈಸೂರು ವಿಶ್ವವಿದ್ಯಾಲಯದ ಮಹಿಳಾ ಹಾಸ್ಟೆಲ್ ಆವರಣ |
| ಪೂರ್ವ | – | ಪ್ರಸ್ತಾಪಿತ I.O.E. ಕಟ್ಟಡ |
| ಪಶ್ಚಿಮ | – | ಹುಣಸೂರು ರಸ್ತೆಯ ಲಿಂಕ್ ರಸ್ತೆ ಮತ್ತು ಹಾಲಿ ಇರುವ |
| | – | ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯದ ಕಟ್ಟಡ/ಜಮೀನು |

ಒಟ್ಟು 14.13 ಗುಂಟೆ ಜಮೀನು

2) ಮೈಸೂರು ವಿಶ್ವವಿದ್ಯಾನಿಲಯವು ವಿಧ್ಯುಕ್ತವಾಗಿ ಮೇಲ್ಕಂಡ ಭೂಮಿಯನ್ನು ತಕ್ಷಣವೇ ಭೌತಿಕವಾಗಿ ಹಸ್ತಾಂತರಿಸತಕ್ಕದ್ದು ಮತ್ತು ಕಾನೂನಿನ ಪ್ರಕಾರ ದಸ್ತಾವೇಜುಗಳನ್ನು ನೋಂದಣಿ ಮಾಡಿಸಲು ಅಗತ್ಯ ಕ್ರಮ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಎಸ್. ಜಾಪಾಲಿ**

ಸರ್ಕಾರದ ಉಪ ಕಾರ್ಯದರ್ಶಿ

ಪಿ.ಆರ್. ನಂ. 514

ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

## ಕಂದಾಯ ಸಚಿವಾಲಯ

### ಸುತ್ತೋಲೆ

ಸಂಖ್ಯೆ: ಕಂಇ 14 ಇಟಿಸಿ 2011, ಬೆಂಗಳೂರು, ದಿನಾಂಕ 08-02-2011

**ವಿಷಯ** : ಭಾರತದ ಜನಗಣತಿ 2011 ಜನಸಂಖ್ಯಾಗಣತಿ-ಜಿಲ್ಲಾ ಉಸ್ತುವಾರಿ ಪ್ರಧಾನ ಕಾರ್ಯದರ್ಶಿಗಳು ಮತ್ತು ಕಾರ್ಯದರ್ಶಿಗಳನ್ನು ಜನಗಣತಿ ಕಾರ್ಯಗಳ ಮೇಲುಸ್ತುವಾರಿಗಾಗಿ ನೇಮಿಸುವ ವಿಚಾರ.

**ಉಲ್ಲೇಖ** : ಭಾರತ ಸರ್ಕಾರದ ಒಳಾಡಳಿತ ಕಾರ್ಯದರ್ಶಿಗಳು, ಗೃಹ ಮಂತ್ರಾಲಯ ರವರ ಅ.ಸ.ಪತ್ರ ಸಂಖ್ಯೆ: 9/165/2010-ಸಿಡಿ (ಸಿಇಎನ್) ದಿನಾಂಕ 27-01-2011.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಭಾರತ ಸರ್ಕಾರದ ಗೃಹ ಮಂತ್ರಾಲಯ ಕಾರ್ಯದರ್ಶಿಗಳು ಭಾರತದ ಜನಗಣತಿ ಕಾರ್ಯಾಚರಣೆ 2011ಕ್ಕೆ ಸಂಬಂಧಿಸಿದಂತೆ ಫೆಬ್ರವರಿ ಮತ್ತು ಮಾರ್ಚ್ 2011ರ ಕಾರ್ಯಚಟುವಟಿಕೆಗಳ ಉಸ್ತುವಾರಿಯನ್ನು ಬಲಪಡಿಸಲು ಸರ್ಕಾರದ ಕಾರ್ಯದರ್ಶಿ ಶ್ರೇಣಿಯ ಹಿರಿಯ ಅಧಿಕಾರಿಗಳನ್ನು ಮೇಲುಸ್ತುವಾರಿಗಾಗಿ ಜಿಲ್ಲಾ ಮಟ್ಟದಲ್ಲಿ ನೇಮಕ ಮಾಡಲು ಉಲ್ಲೇಖಿತ ಪತ್ರದಲ್ಲಿ ಕೋರಿರುತ್ತಾರೆ. ಹೀಗೆ ನೇಮಕಗೊಂಡ ಕಾರ್ಯದರ್ಶಿಗಳು ಜನಗಣತಿ ಕಾರ್ಯಾಚರಣೆ ಕಾರ್ಯ ಚಟುವಟಿಕೆಗಳಲ್ಲಿನ ನ್ಯೂನತೆ ಮತ್ತು ವಿಳಂಬಗಳನ್ನು ಸಕಾಲದಲ್ಲಿ ಗುರುತಿಸಿ ಸರ್ಕಾರಕ್ಕೆ ಮತ್ತು ರಿಜಿಸ್ಟ್ರಾರ್ ಜನರಲ್ ಮತ್ತು ಜನಗಣತಿ ಆಯುಕ್ತರು ಇವರಿಗೆ ಆಗಿಂದಾಗ್ಗೆ ವರದಿ ಮಾಡುವಂತೆ ಕೋರಲು ಸೂಚಿಸಿರುತ್ತಾರೆ.

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ, ಜಿಲ್ಲಾ ಉಸ್ತುವಾರಿ ಪ್ರಧಾನ ಕಾರ್ಯದರ್ಶಿಗಳನ್ನು/ಕಾರ್ಯದರ್ಶಿಗಳನ್ನು ಅವರಿಗೆ ಸಂಬಂಧಿಸಿದ ಜಿಲ್ಲೆಗಳಿಗೆ ಫೆಬ್ರವರಿ ಮತ್ತು ಮಾರ್ಚ್ 2011ರ ಜನಗಣತಿ ಕಾರ್ಯಚಟುವಟಿಕೆಗಳಿಗೆ ಸಂಬಂಧಿಸಿದಂತೆ, ಮೇಲುಸ್ತುವಾರಿ ಕಾರ್ಯದರ್ಶಿಗಳನ್ನಾಗಿ ನೇಮಿಸಿದೆ. ಅವರುಗಳು ಜನಗಣತಿ ಕಾರ್ಯಾಚರಣೆ ಕಾರ್ಯ ಚಟುವಟಿಕೆಗಳಲ್ಲಿನ ನ್ಯೂನತೆ ಮತ್ತು ವಿಳಂಬಗಳನ್ನು ಸಕಾಲದಲ್ಲಿ ಗುರುತಿಸಿ ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳ ಜೊತೆ ಸಂಪರ್ಕದಲ್ಲಿದ್ದು, ಸಮಸ್ಯೆಗಳನ್ನು ಅವರ ಹಂತದಲ್ಲಿ ನಿವಾರಿಸಲು ಕೋರಿದೆ. ಸರ್ಕಾರದ ಮಟ್ಟದಲ್ಲಿ ನಿವಾರಿಸಬೇಕಾದ ಸಮಸ್ಯೆಗಳಿದ್ದಲ್ಲಿ, ಅವುಗಳನ್ನು ಕೂಡಲೇ ನನ್ನ ವೈಯಕ್ತಿಕ ಗಮನಕ್ಕೆ ತರುವಂತೆ ಕೋರುತ್ತೇನೆ.

**ಎಸ್. ವಿ. ರಂಗನಾಥ್**

ಪಿ.ಆರ್. ನಂ. 515 ಸರ್ಕಾರದ ಮುಖ್ಯ ಕಾರ್ಯದರ್ಶಿಗಳು

## FOREST, ECOLOGY AND ENVIRONMENT SECRETARIAT

**Sub :-** Diversion of 0.825 ha. of forest land in Mangalore Division for construction of 110 KV S/C line at Karaya in favour of Executive Engineer (Elect), Major Works Division, KPTCL.

**Read :-** 1) Letter No. A5(2)GFL.CR 15/08-09, dated 21-12-2010 of Principal Chief Conservator of Forests, Bangalore.

2) Government of India letter No. F.No. 11-9/98-FC, dated 16-10-2000, 21-11-2005, 26-12-2007 and 11-09-2009.

**Preamble:-**

The Principal Chief Conservator of Forests, Bangalore vide his letter dated 21-12-2010 read at (1) above has submitted the proposal for diversion of 0.825 ha. of forest land in Sy. No. 100 of Kodimbady Village, Sy. No. 84 of Bannur Village of Puttur Taluk and Deemed forests in Sy No. 159/2 of Karaya Village in Belthangady Taluk, Mangalore Division for construction of 110 KV S/C transmission line at Karaya in favour of Executive Engineer (Elect), Major Works Division, KPTCL, Mangalore under the Forest (Conservation) Act, 1980, subject to certain conditions.

This proposal has been examined as per the general approval of Government of India in its letter dated 16-10-2000, 21-11-2005, 26-12-2007 and 11-09-2009, and it has been decided to accord sanction for diversion of 0.688 ha. of forest land under the Forest (Conservation) Act, 1980. The proposal has been examined in detail and hence the Order.

**Government Order No.: FEE 166 FGL 2010, Bangalore, Dated 17-02-2011**

In the circumstances explained in the preamble above and in accordance with the general approval given by Government of India in their letters dated 16-10-2000, 21-11-2005, 26-12-2007 and 11-09-2009, Government is pleased to accord approval under Forest (Conservation) Act, 1980 for diversion of 0.825 ha. of forest land in Sy. No. 100 of Kodimbady Village, Sy. No. 84 of Bannur Village of Puttur Taluk and Deemed forest in Sy. No. 159/2 of Karaya Village in Belthangady Taluk, Mangalore Division for construction of 110 KV S/C transmission line at Karaya in favour of Executive Engineer (Elect), Major Works Division, KPTCL, Mangalore under the Forest (Conservation) Act, 1980, Subject to the following conditions.

1. The legal status of the forest land shall continue to be forest land.
2. The lease is for a period of 30 years
3. The land shall be utilized for the purpose for which it is released
4. The user agency has to pay the lease rent as fixed by the Government at the time of sanction and any subsequent orders in this regard.
5. In case the forest land is not used for the stipulated purpose or when it is no longer needed for the stipulated purpose, the area should automatically revert to the Karnataka Forest Department.
6. The User Agency should not sub-lease, mortgage and hypothecate the forest area.
7. Only minimum number of trees shall be cut based on actual requirement of the project.

8. The User Agency shall pay the extraction and transportation charges of trees as estimated by the Deputy Conservators of Forests from the proposed forest land.
9. The user agency has to pay the Net Present Value (NPV) as per the Orders dated 28-03-2008 and 09-05-2008 of the Hon'ble Supreme Court of India.
10. The User Agency shall pay necessary compensation towards value of land and crops loss to KCDC as assessed by Managing Director, KCDC Ltd.,
11. The Karnataka Forest Act, 1963 and Rules, 1969 and other relevant Acts and Rules will applicable for any violation.
12. The User Agency shall abide by all the conditions imposed upon by the Government of India/State Government /Principal Chief Conservator of Forests, Bangalore (HoFF)

By Order and in the name of the Governor of Karnataka

**H. M. Mallikarjuna Swamy**

Under Secretary to Government,

Forest, Ecology and Environment Department

PR. No. 531

## ಇಂಧನ ಸಚಿವಾಲಯ

**ವಿಷಯ** : ಶ್ರೀ ಎಲ್. ಮೇಘನಾಯ್ಕ್, ಉಪ ವಿದ್ಯುತ್ ಪರಿವೀಕ್ಷಕರು, ಕೇಂದ್ರೀಯ ಉಪ ವಿಭಾಗ, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಬೆಂಗಳೂರು ಪೂರ್ವ ವಲಯ, ಮಲ್ಲೇಶ್ವರಂ, ಬೆಂಗಳೂರು ಇವರು ಟ್ರ್ಯಾಪ್ ಪ್ರಕರಣದಲ್ಲಿ ಲೋಕಾಯುಕ್ತರ ಬಲೆಗೆ ಸಿಕ್ಕಿಬಿದ್ದಿದ್ದು ಅಮಾನತ್ತಿನಲ್ಲಿಡುವ ಬಗ್ಗೆ.

**ಓದಲಾಗಿದೆ** : 1) ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)ಸಿಟಿ/ಕ್ರೈಂ.63/2010, ದಿನಾಂಕ 21–12–2010.

2) ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ: ಮುವಿಪ/ಸಿಸ1/ಕಲೋಆ/28689/10–11, ದಿನಾಂಕ 22–12–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಈ ಕೆಳಕಂಡಂತೆ ವರದಿ ಮಾಡಿರುತ್ತಾರೆ:–

1) ದಿನಾಂಕ 18–12–2010ರಂದು ಶ್ರೀ ಸಿ. ವಿ. ಮಲ್ಲಿಕಾರ್ಜುನ, ಹೆಬ್ಬಾಳ, ಕೆಂಪಾಪುರ, ಬೆಂಗಳೂರು ರವರು (ಫಿರ್ಯಾದುದಾರರು) ವಿದ್ಯುತ್ ಗುತ್ತಿಗೆದಾರರಾಗಿ ಕೆಲಸ ನಿರ್ವಹಿಸುತ್ತಿದ್ದು, ಶ್ರೀಮತಿ ನಾಗರತ್ನಮ್ಮ ಎಂಬುವವರಿಗೆ ಸೇರಿದ ಕಟ್ಟಡದ ವಿದ್ಯುತ್ ಕಾಮಗಾರಿಯ ಗುತ್ತಿಗೆ ಪಡೆದಿದ್ದು, ಈ ಕುರಿತು ಪರಿವರ್ತಕದ ಅನುಮೋದನೆಯನ್ನು ಪಡೆಯಲು ದಿನಾಂಕ 07–12–2010 ರಂದು ಉಪ ವಿದ್ಯುತ್ ಪರಿವೀಕ್ಷಕರ ಕಛೇರಿಗೆ ಅರ್ಜಿ ಸಲ್ಲಿಸಿ ನಿಗದಿತ ಶುಲ್ಕ ಪಾವತಿಸಿದ್ದು, ಈ ಸಂಬಂಧ ಆರೋಪಿತ ಶ್ರೀ ಎಲ್. ಮೇಘನಾಯ್ಕ್ ರವರು ದಿನಾಂಕ 15–12–2010 ರಂದು ಸ್ಥಳ ಪರಿಶೀಲನೆ ಮಾಡಿ ಅದೇ ದಿನ ಸಾಯಂಕಾಲ ತಮ್ಮ ಕಛೇರಿಗೆ ಬರುವಂತೆ ಫಿರ್ಯಾದುದಾರರಿಗೆ ತಿಳಿಸಿದಂತೆ ಫಿರ್ಯಾದುದಾರರು ಆರೋಪಿತರನ್ನು ಭೇಟಿ ಮಾಡಿದಾಗ ಕಟ್ಟಡದಲ್ಲಿ ಸಣ್ಣಪುಟ್ಟ ನ್ಯೂನತೆಗಳು ಇದ್ದು ಅವುಗಳನ್ನು ಸರಿಪಡಿಸಿ ಅನುಮೋದನೆ ನೀಡಲು ರೂ. 50,000/–ಗಳ ಲಂಚದ ಹಣಕ್ಕಾಗಿ ಒತ್ತಾಯಿಸಿದ್ದು, ಮಾತುಕತೆಯ ನಂತರ ಆರೋಪಿಯು ತನಗೆ ರೂ. 15,000/– ಹಾಗೂ ತನ್ನ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುವ ಮೇಡಂ (ಸಹಾಯಕ ವಿದ್ಯುತ್ ನಿರೀಕ್ಷಕರು) ರವರಿಗೆ ರೂ. 3,000/–ಗಳ ಲಂಚದ ಹಣವನ್ನು ನೀಡುವಂತೆ ತಿಳಿಸಿ ನ್ಯೂನತೆಗಳ ಬಗ್ಗೆ ಪರಿಶೀಲನಾ ಪತ್ರವನ್ನು ನೀಡುತ್ತೇನೆ. ಅದಕ್ಕೆ ನೀಡುವ ಉತ್ತರದ ಪತ್ರದೊಂದಿಗೆ ತನಗೆ ರೂ. 15,000/– ಹಾಗೂ ಮೇಡಂಗೆ ರೂ. 3,000/–ಗಳನ್ನು ದಿನಾಂಕ 18–12–2010 ರಂದು ತಂದು ಕೊಟ್ಟು ನಂತರ ಪರಿವರ್ತಕದ ಅನುಮೋದನೆಯನ್ನು ಪಡೆಯುವಂತೆ ತಿಳಿಸಿದ್ದರು, ಫಿರ್ಯಾದುದಾರರಿಗೆ ಆರೋಪಿತರು ಒತ್ತಾಯಿಸಿದ ಲಂಚದ ಹಣವನ್ನು ನೀಡಲು ಇಚ್ಛೆ ಇಲ್ಲದ ಕಾರಣ ಆರೋಪಿತರ ವಿರುದ್ಧ ಕಾನೂನು ರೀತ್ಯ ಕ್ರಮವನ್ನು ಕೈಗೊಳ್ಳಬೇಕೆಂದು ಕೋರಿ ದೂರನ್ನು ನೀಡಿರುವುದಾಗಿ ತಿಳಿಸಿರುತ್ತಾರೆ.

2) ಅದರಂತೆ ಶ್ರೀ ಎಸ್. ಸುರೇಶ್ ಬಾಬು, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ರವರು ಶ್ರೀ ಎಲ್. ಮೇಘನಾಯ್ಕ್ ಉಪ ವಿದ್ಯುತ್ ಪರಿವೀಕ್ಷಕರು (ಕೇಂದ್ರ) ಬೆಂಗಳೂರು ಪೂರ್ವ, ನಂ. 307, 18ನೇ ಕ್ರಾಸ್, 6ನೇ ಮೈನ್, ಮಲ್ಲೇಶ್ವರಂ, ಬೆಂಗಳೂರು ರವರ ವಿರುದ್ಧ ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಸಹವಾಚನ ಕಲಂ 13(2)ರ ರೀತ್ಯ ದಿನಾಂಕ 18–12–2010 ರಂದು ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣಾ ಮೊಕದ್ದಮೆ ಸಂಖ್ಯೆ: 63/2010 ರಡಿಯಲ್ಲಿ ಪ್ರಕರಣವನ್ನು ದಾಖಲಿಸಿ ತನಿಖೆಯನ್ನು ಕೈಗೊಂಡು ನಂತರ ಪಂಚ ಸಾಕ್ಷಿಗಳೊಂದಿಗೆ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿಯವರು ದಿನಾಂಕ 18–12–2010ರಂದು ಬೀಸಿದ ಬಲೆಯಲ್ಲಿ ಶ್ರೀ ಎಲ್. ಮೇಘನಾಯ್ಕ್ ಉಪ ವಿದ್ಯುತ್ ಪರಿವೀಕ್ಷಕರು (ಕೇಂದ್ರ) ಬೆಂಗಳೂರು ಫಿರ್ಯಾದುದಾರರಿಂದ ರೂ. 18,000/–ಗಳ ಲಂಚ ಸ್ವೀಕರಿಸುವಾಗ ಸಿಕ್ಕಿಬಿದ್ದಿದ್ದು, ಆರೋಪಿಯಾದ ಶ್ರೀ ಎಲ್. ಮೇಘನಾಯ್ಕ್ ಉಪ ವಿದ್ಯುತ್ ಪರಿವೀಕ್ಷಕರು (ಕೇಂದ್ರ) ರವರ ಬಲಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಅದ್ದಿಸಿ ತೊಳೆಸಿದಾಗ ಬಣ್ಣ ರಹಿತವಾದ ದ್ರಾವಣವು ತಿಳಿ ಗುಲಾಬಿ ಬಣ್ಣಕ್ಕೆ ಹಾಗೂ ಎಡಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಅದ್ದಿಸಿ ತೊಳೆಸಿದಾಗ, ಬಣ್ಣರಹಿತವಾದ ದ್ರಾವಣವು ಗುಲಾಬಿ ಬಣ್ಣಕ್ಕೆ ಹಾಗೂ ಲಂಚದ ಹಣವನ್ನಿಟ್ಟಿದ್ದ ಟೇಬಲ್ ಡ್ರಾಯರ್‌ನ ಒಳಭಾಗವನ್ನು ಒರೆಸಿದ ಹತ್ತಿಯ ಬಟ್ಟೆಯ ಚೂರನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಅದ್ದಿಸಿ ತೊಳೆಸಿದಾಗ, ಬಣ್ಣರಹಿತವಾದ ದ್ರಾವಣವು ತಿಳಿ ಗುಲಾಬಿ ಬಣ್ಣಕ್ಕೆ ತಿರುಗುವುದರ ಮೂಲಕ ಸಕಾರಾತ್ಮಕವಾಗಿ ಲಂಚದ ಹಣವನ್ನು ಸ್ವೀಕರಿಸಿರುವುದು ದೃಢಪಟ್ಟಿರುತ್ತದೆ. ಆರೋಪಿಯು ಫಿರ್ಯಾದುದಾರರಿಂದ ಲಂಚದ ಹಣವನ್ನು ಕೇಳಿ ಪಡೆದ ಬಗ್ಗೆ ಫಿರ್ಯಾದು ಮತ್ತು ನೆರಳು ಸಾಕ್ಷಿದಾರರು ತಮ್ಮ ಹೇಳಿಕೆಗಳಲ್ಲಿ

ದೃಢಪಡಿಸಿರುತ್ತಾರೆ. ಆರೋಪಿಯಾದ ಶ್ರೀ ಎಲ್. ಮೇಘನಾಯ್ಕ್ ಉಪ ವಿದ್ಯುತ್ ಪರಿವೀಕ್ಷಕರು (ಕೇಂದ್ರ) ಇವರ ಮೇಲಿನ ಭ್ರಷ್ಟಾಚಾರದ ಆಪಾದನೆ ಮೇಲುನೋಟಕ್ಕೆ ಸಾಬೀತಾಗಿರುತ್ತದೆ. ಆದ್ದರಿಂದ ಆರೋಪಿ ಸರ್ಕಾರಿ ಅಧಿಕಾರಿಯಾದ ಶ್ರೀ ಎಲ್. ಮೇಘನಾಯ್ಕ್ ಉಪ ವಿದ್ಯುತ್ ಪರಿವೀಕ್ಷಕರು (ಕೇಂದ್ರ) ರವರು ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿ ಪುರಾವೆಗಳನ್ನು ನಾಶ ಮಾಡುವ ಸಾಧ್ಯತೆಗಳಿರುವುದರಿಂದ ಇವರನ್ನು ಈ ಕೂಡಲೇ ಅಮಾನತ್ತಿನಲ್ಲಿಡಬೇಕೆಂದು ಹಾಗೂ ಅವರ ಲೀನ್ (ಸ್ಥಾನವನ್ನು) ಬೇರೆ ಕಡೆಗೆ ವರ್ಗಾಯಿಸುವಂತೆ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಕೋರಿರುತ್ತಾರೆ ಹಾಗೂ ಈ ಬಗ್ಗೆ ಕೈಗೊಂಡ ಕ್ರಮದ ವಿವರ/ಮಾಹಿತಿಗಳನ್ನು ಕಳುಹಿಸಿಕೊಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು ತಮ್ಮ ಪತ್ರದಲ್ಲಿ ಶ್ರೀ ಎಲ್. ಮೇಘನಾಯ್ಕ್ ಉಪ ವಿದ್ಯುತ್ ಪರಿವೀಕ್ಷಕರು ಕೇಂದ್ರೀಯ ಉಪವಿಭಾಗ, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಬೆಂಗಳೂರು ಪೂರ್ವ ವಲಯ, ಇವರ ವಿರುದ್ಧ ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ವಿಭಾಗ, ಇವರು ಲಂಚ ನಿರೋಧ ಕಾಯ್ದೆ 1988ರ ಕಲಂ 7,13(1)(ಡಿ) ಸಹವಾಚನ 13 (2)ರನ್ವಯ ದಿನಾಂಕ 18-12-2010 ರಂದು ಲೋಕಾಯುಕ್ತ ಪೊಲೀಸ್ ಠಾಣಾ ಮೊಕದ್ದಮೆ ಸಂಖ್ಯೆ: 63/2010ರಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು ದಸ್ತಗಿರಿ ಮಾಡಿರುವುದಾಗಿ ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರು ದಿನಾಂಕ 20-12-2010ರ ಪತ್ರದಲ್ಲಿ ವರದಿ ಮಾಡಿರುವುದಾಗಿ ತಿಳಿಸಿರುತ್ತಾರೆ.

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಆಪಾದಿತ ಅಧಿಕಾರಿಯು ದಿನಾಂಕ 18-12-2010ರಂದು ಲಂಚದ ಹಣವನ್ನು ಸ್ವೀಕರಿಸುತ್ತಿರುವಾಗ ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿಬಿದ್ದಿದ್ದು, ಅವರ ಎರಡು ಕೈಗಳನ್ನು ದ್ರಾವಣದಲ್ಲಿ ಅದ್ದಿದಾಗ ಬಣ್ಣ ಬದಲಾಗಿರುವುದು ಮೇಲ್ನೋಟಕ್ಕೆ ಭ್ರಷ್ಟಾಚಾರದ ಆಪಾದನೆಯು ಸಾಬೀತುಗೊಂಡಿರುವುದಾಗಿ ಕಂಡುಬಂದಿರುವುದರಿಂದ ಶ್ರೀ ಎಲ್. ಮೇಘನಾಯ್ಕ್ ಉಪ ವಿದ್ಯುತ್ ಪರಿವೀಕ್ಷಕರು ಕೇಂದ್ರೀಯ ಉಪವಿಭಾಗ, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ ಬೆಂಗಳೂರು ಪೂರ್ವ ವಲಯ, ಮಲ್ಲೇಶ್ವರಂ, ಬೆಂಗಳೂರು ಇವರು ಅಲ್ಲಿಯೇ ಮುಂದುವರೆದಲ್ಲಿ ಸುಗಮ ತನಿಖೆಗೆ ಅಡ್ಡಿ ಉಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿ ಪುರಾವೆಗಳನ್ನು ನಾಶಪಡಿಸುವ ಸಾಧ್ಯತೆಗಳು ಇರುವುದರಿಂದ ಅಧಿಕಾರಿಯವರ ವಿರುದ್ಧದ ಮುಂದಿನ ತನಿಖೆ/ವಿಚಾರಣೆಯನ್ನು ಬಾಕಿ ಇಟ್ಟು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 160 ಇಬಿಎಸ್ 2010, ಬೆಂಗಳೂರು, ದಿನಾಂಕ: 19-02-2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎಲ್. ಮೇಘನಾಯ್ಕ್ ಉಪ ವಿದ್ಯುತ್ ಪರಿವೀಕ್ಷಕರು ಕೇಂದ್ರೀಯ ಉಪವಿಭಾಗ, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ ಬೆಂಗಳೂರು ಪೂರ್ವ ವಲಯ, ಮಲ್ಲೇಶ್ವರಂ, ಬೆಂಗಳೂರು ಇವರ ವಿರುದ್ಧ ವಿಚಾರಣೆ ಬಾಕಿ ಇಟ್ಟು ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 10 (1)ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಮಾನತ್ತಿನಲ್ಲಿಡಲಾಗಿದೆ.

ಶ್ರೀ ಎಲ್. ಮೇಘನಾಯ್ಕ್ ಉಪ ವಿದ್ಯುತ್ ಪರಿವೀಕ್ಷಕರು ಕೇಂದ್ರೀಯ ಉಪವಿಭಾಗ, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ ಬೆಂಗಳೂರು ಪೂರ್ವ ವಲಯ, ಮಲ್ಲೇಶ್ವರಂ, ಬೆಂಗಳೂರು ಇವರು ಅಮಾನತ್ತಿನಲ್ಲಿರುವ ಅವಧಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳನ್ವಯ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ. ಹಾಗೂ ಈ ಅವಧಿಯಲ್ಲಿ ಸಕ್ಷಮ ಪ್ರಾಧಿಕಾರದ ಲಿಖಿತ ಅನುಮತಿಯಿಲ್ಲದೆ ಕೇಂದ್ರ ಕಾರ್ಯ ಸ್ಥಾನವನ್ನು ಬಿಡತಕ್ಕದ್ದಲ್ಲ ಎಂದು ಸರ್ಕಾರವು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಜಾತಮ್ಮ**

ಪೀಠಾಧಿಕಾರಿ, ಇಂಧನ ಇಲಾಖೆ

ಪಿ.ಆರ್. ನಂ. 532

## ENERGY SECRETARIAT

## CORRIGENDUM

No. EN 505 NCE 2010, Bangalore, Dated 18th February 2011

The following condition No. 2 appearing in the order portion of the Government Order No. EN 505 NCE 2010, dated 10-01-2011.

"PPA is assigned to BESCOM, BESCOM shall execute the PPA with M/s. Maris Spinners Limited within a period of one month"

**Shall be substituted by the following:-**

"M/s Maris Spinners Limited is permitted to enter into wheeling and banking with concerned ESCOM and KPTCL."

By Order and in the name of the Governor of Karnataka

**Suresh B. Krishnappanavar**

Under Secretary to Government

Energy Department

PR. No. 533

## ENERGY SECRETARIAT

### CORRIGENDUM

No. EN 506 NCE 2010, Bangalore, Dated 18th February 2011

The following condition No. 2 appearing in the order portion of the Government Order No. EN 506 NCE 2010, dated 10-01-2011.

"PPA is assigned to BESCOM, BESCOM shall execute the PPA with M/s. Maris Hotels and Theatres (P) Limited within a period of one month"

**Shall be substituted by the following:-**

"M/s Maris Hotels and Theatres (P) Limited is permitted to enter into wheeling and banking with concerned ESCOM and KPTCL."

By Order and in the name of the Governor of Karnataka

**Suresh B. Krishnappanavar**

Under Secretary to Government

PR. No. 534 Energy Department

## ENERGY SECRETARIAT

### CORRIGENDUM

No. EN 503 NCE 2010, Bangalore, Dated 18th February 2011

The following condition No. 2 appearing in the order portion of the Government Order No. EN 503 NCE 2010, dated 10-01-2011.

"PPA is assigned to GESCOM, GESCOM shall execute the PPA with M/s. SVE Castings Private Limited within a period of one month"

**Shall be substituted by the following:-**

"M/s. SVE Castings Private Limited is permitted to enter into wheeling and banking with concerned ESCOM and KPTCL."

By Order and in the name of the Governor of Karnataka

**Suresh B. Krishnappanavar**

Under Secretary to Government

PR. No. 535 Energy Department

## ENERGY SECRETARIAT

**Sub :-** Transfer of 4.5 MW wind power capacity in favour of M/s Mantri Homes-reg.

**Read :-**
1. Government Order No. DE 59 NCE 2004, dated 08-03-2004
2. Government Order No. EN 393 NCE 2005, dated 28-12-2005
3. Government Order No. EN 180 NCE 2007, dated 15-05-2007
4. Letter No. KRED/08/MH-4.5MW (K-508, 509 & 510)-SRL/2011/263, dated 11/17-01-2011 received from the Managing Director, Karnataka Renewable Energy Development Limited, Bangalore.

**Preamble:-**

In the Government Order read at (1) above, sanction has been accorded for implementation of 125 MW capacity wind power project at Shimoga, Bellary, Chitradurga, Chikkamagalur, Tumkur and Dharwad Districts to M/s Sarjan realities Private Limited. Out of 125 MW wind power capacity the part capacity of 33 MW (11+22=33 MW) is allotted at Shimoga District.

In the Government Order read at (2) above, sanction has been accorded for enhancement of wind power capacity from 33 MW to 44.4 MW Kalavi Ranganagudda, Maddapura, Gangavannadasara State forest, Horogoppa in Shimoga District to M/s Sarjan Realities Limited.

In the Government Order read at (3) above sanction has been accorded for enhancement of wind power capacity from 44.4 MW to 111.00 MW at Gangavanasara and Kudrekonda areas in Shimoga and Davangere Districts to M/s Sarjan Realities Limited.

The Managing Director, Karnataka Renewable Energy Development Limited, Bangalore in his letter read at (4) above has recommended to the Government for transfer of 4.5 MW wind power capacity in favour of M/s Mantri Homes from out of the sanctioned 111.00 MW capacity to M/s Sarjan Realities Limited at Gangarkatte & Shidaganahalu villages, Shikaripura Taluk, Shimoga District.

The proposal has been examined in detail and the following orders issued:-

**Government Order No.: EN 27 NCE 2011, Bangalore, Dated 18-02-2011**

Government accords approval for transfer of 4.5 MW wind power capacity in favour of M/s Mantri Homes from out of the sanctioned 111.00 MW capacity to M/s Sarjan Realities Limited at Gangarkatte & Shidaganahalu villages, Shikaripura Taluk, Shimoga District as detailed below and subject to the following conditions:-

| Village Name | Taluk & District | Land Survey Number | Extent in land | Wind Turbine Generator location No's |
|---|---|---|---|---|
| Gangarkatte & Shidaganahalu | Shikaripura/Shimoga | 1 | 0.25 Hectares per WTG of capacity 1.5 MW | K-508, K-509, K-510 |

1. M/s Mantri Homes shall execute an agreement with Government within 45 (forty five) days from the date of issue of this Order.
2. M/s Mantri Homes is permitted to enter into wheeling and banking with concerned ESCOM and KPTCL.
3. The developer should commission the project during the Financial Year 2010-11
4. The Government reserves the right to cancel/modify this Order.

The other terms and conditions of the Government Order read at (1) above shall IPSO FACTO applicable.

By Order and in the name of the Governor of Karnataka
**Suresh B. Krishnappanavar**
Under Secretary to Government
Energy Department

PR. No. 536

## ನಗರಾಭಿವೃದ್ಧಿ ಸಚಿವಾಲಯ

### ತಿದ್ದುಪಡಿ

ಸಂಖ್ಯೆ: ನಅಇ/195/ನಯೋಸೇ/2010, ಬೆಂಗಳೂರು, ದಿನಾಂಕ 10/14-02-2011

ಸರ್ಕಾರದ ಆದೇಶ ಸಂಖ್ಯೆ: ನಅಇ 195 ನಯೋಸೇ 2010, ದಿನಾಂಕ 07-01-2011ರಲ್ಲಿನ ಕಂಡಿಕೆ-1ರ 5ನೇ ಸಾಲಿನಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರ ಬದಲಾಗಿ 'ಉಪ ಪೋಲೀಸ್ ಮಹಾ ನಿರೀಕ್ಷಕರು' ಹಾಗೂ 9ನೇ ಸಾಲಿನಲ್ಲಿ ಕಲಂ 19(1)(ಸಿ) ಬದಲಾಗಿ ಕಲಂ 19(1)(ಬಿ) ಎಂದು ತಿದ್ದಿ ಓದಿಕೊಳ್ಳತಕ್ಕದ್ದು ಹಾಗೂ ಸಾಕ್ಷಿದಾರರ ಪಟ್ಟಿಯಲ್ಲಿ VIII ಮತ್ತು XVI ರಲ್ಲಿರುವ ಹೆಸರುಗಳನ್ನು ಕೈಬಿಡಲಾಗಿದೆ. ಕ್ರಮ ಸಂಖ್ಯೆ-8ರಲ್ಲಿ ಫಿರ್ಯಾದಿಯ ಪತ್ನಿ ಶ್ರೀಮತಿ ಲತಾರವರು ಸಲ್ಲಿಸಿರುವ ಅರ್ಜಿ ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

ಪಿ.ಆರ್. ನಂ. 537

## ಇಂಧನ ಸಚಿವಾಲಯ

**ವಿಷಯ** : ಮೆ॥ ಫಾಲ್ಗುಣಿ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್-1 ಇವರಿಗೆ ಹಂಚಿಕೆಯಾಗಿ, ರದ್ದುಪಡಿಸಲಾಗಿರುವ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯ ರದ್ಧತಿ ಆದೇಶವನ್ನು ಹಿಂಪಡೆದು, ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ** :
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 240 ಎನ್‌ಸಿಇ 2002, ದಿನಾಂಕ 10-10-2002
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 422 ಎನ್‌ಸಿಇ 2006, ದಿನಾಂಕ 09-11-2006
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಶೋಕಾಸ್ ನೋಟೀಸ್/2010, ದಿನಾಂಕ 17-04-2010.
4. ಕಾರಣ ಕೇಳುವ ನೋಟೀಸು ಸಂಖ್ಯೆ: ಇಎನ್ 148 ಎನ್‌ಸಿಇ 2010, ದಿನಾಂಕ 26-04-2010.
5. ಸರ್ಕಾರದ ಆದೇಶ ಸಂಖ್ಯೆ: ಇಎನ್ 148 ಎನ್‌ಸಿಇ 2010, ದಿನಾಂಕ 19-06-2010
6. ಮೆ॥ ಸೋಹಮ್ ರಿನೆವೆಬಲ್ ಎನರ್ಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಇವರ ಪತ್ರಗಳ ದಿನಾಂಕ 21-06-2010 ಮತ್ತು 25-06-2010.
7. ಸರ್ಕಾರದ ಪತ್ರ ಸಂಖ್ಯೆ: ಇಎನ್ 147 ಎನ್‌ಸಿಇ 2010, ದಿನಾಂಕ 01-07-2010
8. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಕಿಲಂಜಾರ-ಎಂಹೆಚ್‌ಎಸ್/2010/2272, ದಿನಾಂಕ 30-07-2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಫಾಲ್ಗುಣಿ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್-1 ಇವರಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಮುಚ್ಚಮೊಗರು ಹೊಳೆಗೆ ಅಡ್ಡಲಾಗಿ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ದಿನಾಂಕ 09-11-2006 ರಿಂದ 3 ವರ್ಷಗಳ ಅವಧಿಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಅನುಷ್ಠಾನದ ಅವಧಿಯು ಸರ್ಕಾರದ ಆದೇಶದಂತೆ ಪೂರ್ಣಗೊಂಡಿದ್ದು, ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದೇ

ಇರುವುದರಿಂದ ಹಾಗೂ ಕಾಲಾವಕಾಶ ವಿಸ್ತರಣೆಯನ್ನು ಮಾಡಿಕೊಳ್ಳದೇ ಇರುವ ಹಿನ್ನೆಲೆಯಲ್ಲಿ ಮೆ॥ ಫಾಲ್ಗುಣಿ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್–1 ಇವರಿಗೆ ಕಾರಣ ಕೇಳುವ ನೋಟಿಸನ್ನು ಜಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆ ಆದೇಶವನ್ನು ಏಕೆ ರದ್ದುಪಡಿಸಬಾರದೆಂದು ಮೆ॥ ಫಾಲ್ಗುಣಿ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್–1 ಇವರಿಗೆ ನೋಟೀಸನ್ನು ಕಳುಹಿಸಿದ 15 ದಿನಗಳೊಳಗಾಗಿ ಸಮಜಾಯಿಷಿಯನ್ನು ನೀಡುವಂತೆ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಆದೇಶದಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಇಂಇ 240 ಎನ್‌ಸಿಇ 2002 ದಿನಾಂಕ 10–10–2002ರಲ್ಲಿ ಮೆ॥ ಫಾಲ್ಗುಣಿ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್–1 ಇವರಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಪುಚ್ಚಮೊಗರು ಹೊಳೆಗೆ ಅಡ್ಡಲಾಗಿ ಹಂಚಿಕೆಯಾಗಿದ್ದ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ರದ್ದು ಪಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರಗಳಲ್ಲಿ ಮೆ॥ ಸೋಹಮ್ ರಿನೆವೆಬಲ್ ಎನರ್ಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಇವರು ಮೆ॥ ಫಾಲ್ಗುಣಿ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್–1 ಇವರ ರದ್ದುಪಡಿಸಿರುವ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಪೂರ್ವಸ್ಥಿತಿಗೆ ತರುವಂತೆ ಕೋರಿ, ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಸಾಧಿಸಿರುವ ಪ್ರಗತಿಯ ಬಗ್ಗೆ ಕೆಲವೊಂದು ದಾಖಲಾತಿಗಳನ್ನು ಸಲ್ಲಿಸಿರುತ್ತಾರೆ. ಪ್ರಗತಿಯ ವಿವರ ಈ ಕೆಳಗಿನಂತಿದೆ:–

a. Clearance from Karnataka State Pollution Control Board
b. Evacuation approval from KPTCL
c. Purchased 4.26 acres of land in Survey No. 97 of Irruvial village
d. Certification of project expenses by Chartered Accountant

ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ಸರ್ಕಾರದ ಪತ್ರದೊಂದಿಗೆ ಮೆ॥ ಸೋಹಮ್ ರಿನೆವೆಬಲ್ ಎನರ್ಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಇವರ ದಿನಾಂಕ 21–06–2010ರ ಪತ್ರವನ್ನು ಹಾಗೂ ಅದರ ಅಡಕಗಳನ್ನು ಕೆ.ಆರ್.ಇ.ಡಿ.ಎಲ್.ಗೆ ಕಳುಹಿಸಿ ಯೋಜನೆಯ ಸ್ಥಳ ಪರಿವೀಕ್ಷಣೆ ಮಾಡಿ, ವರದಿಯನ್ನು ನೀಡಲು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (8)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಫಾಲ್ಗುಣಿ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್–1 ಇವರ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ (ಇರುವೈಲ್ ಗ್ರಾಮ) ಸ್ಥಳ ಪರಿವೀಕ್ಷಣೆ ಮಾಡಿ, ಪರಿವೀಕ್ಷಣಾ ವರದಿಯನ್ನು ಕಳುಹಿಸಿರುತ್ತಾರೆ.

ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಈ ಕೆಳಗಿನ ಕ್ರಮ ವಹಿಸಿರುವುದನ್ನು ತಪಾಸಣೆ ನಡೆಸಿದ ಕೆ.ಆರ್.ಇ.ಡಿ.ಎಲ್.ನ ಅಧಿಕಾರಿಗಳು ವರದಿ ಮಾಡಿದ್ದಾರೆ:–

1. This proposed Project is about Down Stream of the proposed 10.5 MW capacity Mullibettu Mini Hydel Project.
2. The Company is in possession of private land to an extent of 4.26 acres
3. The Company proposes to evacuate power generated at this plant by laying 110 KV S/C transmission line for a distance of about 1 Km from the plant to the already commissioned pooling station erected and commissioned adjacent to the 10.5 MW capacity Mullibettu Mini Hydel Project.
4. The Pooling Station and 110 KV D/C transmission line from the pooling station to the 110/11 KV KPTCL sub-station at Moodibidri has been created as a common facility for the above cancelled project and also for M/s Phalguni Power Projects-II.

ತಹಶೀಲ್ದಾರ್, ಮೂಡಬಿದ್ರಿ, ಮಂಗಳೂರು ತಾಲ್ಲೂಕು ಇವರು ನೀಡಿರುವ ದಿನಾಂಕ 26–12–2003ರ ಪ್ರಮಾಣ ಪತ್ರದಲ್ಲಿ ಮೆ॥ ಫಾಲ್ಗುಣಿ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್–1 (ಕಿಲಂಜಾರ ಕಿರು ಜಲ ವಿದ್ಯುತ್ ಯೋಜನೆ–ಇರುವೈಲ್ ಗ್ರಾಮ)ನ ಯೋಜನೆಯು ಮಂಗಳೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಗೆ ಒಳಪಡುತ್ತದೆ ಎಂದು ದೃಢೀಕರಿಸಿರುತ್ತಾರೆ.

ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪರಿವೀಕ್ಷಣಾ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ಮೆ॥ ಫಾಲ್ಗುಣಿ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್–1 ಇವರು 6.00 ಮೆಗಾ ವ್ಯಾಟ್ ಸಾಮರ್ಥ್ಯದ (ಇರುವೈಲ್ ಗ್ರಾಮ) ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಸಾಕಷ್ಟು ಪ್ರಗತಿಯನ್ನು ಸಾಧಿಸಿರುವುದನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 148 ಎನ್‌ಸಿಇ 2010, ಬೆಂಗಳೂರು, ದಿನಾಂಕ: 18–02–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಇಎನ್ 148 ಎನ್‌ಸಿಇ 2010 ದಿನಾಂಕ 19–06–2010ರಲ್ಲಿ ಮೆ॥ ಫಾಲ್ಗುಣಿ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್–1 ಇವರ (ಹಿಂದಿನ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕು, ಪುಚ್ಚಮೊಗರು ಹೊಳೆಗೆ ಇರವೈಲ್ ಗ್ರಾಮ) ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲ್ಲೂಕಿನ ಇರುವೈಲ್ ಗ್ರಾಮದ ಪುಚ್ಚಮೊಗರು ಹೊಳೆಗೆ ಅಡ್ಡಲಾಗಿ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ರದ್ಧತಿ ಆದೇಶವನ್ನು ಹಿಂಪಡೆದು ಯೋಜನೆಯನ್ನು ಪೂರ್ವಸ್ಥಿತಿಗೆ ತರಲಾಗಿದೆ. ಈ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು 31–03–2012ರ ತನಕ ವಿಸ್ತರಿಸಲಾಗಿದೆ.

ಈ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿನ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. ನಂ. 538

## ಕೃಷಿ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಬೀಜ ನಿಗಮ ನಿಯಮಿತದ ವ್ಯವಸ್ಥಾಪಕರ ಹುದ್ದೆಯನ್ನು ಭರ್ತಿ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಕೃತೋಇ 268 ಕೃಪಸೇ 2008 ದಿನಾಂಕ : 02-01-2009.
2. ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 192 ಸೇಇಮ 2008 ದಿನಾಂಕ : 14-08-2009.
3. ಸರ್ಕಾರದ ಆದೇಶ ಸಂಖ್ಯೆ : ಕೃತೋಇ 109 ಕೃಪಸೇ 2010 ದಿನಾಂಕ : 12-08-2010.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕರ್ನಾಟಕ ರಾಜ್ಯ ಬೀಜ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯನ್ನು ಕೃಷಿ ನಿರ್ದೇಶಕರ ಹುದ್ದೆಯ ಸ್ಥಾನಮಾನ ಅಧಿಕಾರಿಯಿಂದ ನೇಮಿಸುವುದು ಅವಶ್ಯವೆಂದು ಪರಿಗಣಿಸಿ, ಸದರಿ ಹುದ್ದೆಯನ್ನು ಕೃಷಿ ನಿರ್ದೇಶಕರ ಹುದ್ದೆಯ ಸ್ಥಾನಮಾನಕ್ಕೆ ಸಮನಾಗಿ ಉನ್ನತೀಕರಿಸಲಾಗಿತ್ತು.

ಕ್ರಮಾಂಕ (2) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯ ದಿನಾಂಕ : 14-8-2009 ರಲ್ಲಿ ಸದರಿ ಹುದ್ದೆಗೆ ಶ್ರೀ ಜಿ. ಪ್ರಕಾಶ್, ನಿರ್ದೇಶಕರು ಜಲಾನಯನ ಅಭಿವೃದ್ಧಿ ಇಲಾಖೆ ಇವರನ್ನು ವರ್ಗಾಯಿಸಿ ನೇಮಿಸಲಾಗಿತ್ತು. ಸದರಿಯವರು ತಮಗೆ ನೇಮಿಸಿದ ಹುದ್ದೆಯಲ್ಲಿ ಹಾಜರಾಗಲು ಒಲವು ತೋರಿಸದೇ ನಿವೃತ್ತಿಯಾಗುವ ದಿನದವರೆಗೂ ಸದರಿ ಹುದ್ದೆಗೆ ಹಾಜರಾಗದಿರುವುದರಿಂದ ಸದರಿ ಹುದ್ದೆಯನ್ನು ಕ್ರಮಾಂಕ (3) ರಲ್ಲಿ ಓದಲಾದ ದಿನಾಂಕ : 12-8-2010 ರ ಸರ್ಕಾರದ ಅಧಿಸೂಚನೆಯಲ್ಲಿ ಪುನಃ ಅಪರ ಕೃಷಿ ನಿರ್ದೇಶಕರ ಹುದ್ದೆಗೆ ನಿಮ್ನೀಕರಿಸಲಾಗಿದೆ ಹಾಗೂ ಸದರಿ ಹುದ್ದೆಯಲ್ಲಿ ಕರ್ನಾಟಕ ರಾಜ್ಯ ಬೀಜ ನಿಗಮ ನಿಯಮಿತದಲ್ಲಿ ಚೀಫ್ ಜನರಲ್ ಮ್ಯಾನೇಜರ್ ಆಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಕೆ. ಆನಂದಕೃಷ್ಣರವರನ್ನು ಹೆಚ್ಚಿನ ಪ್ರಭಾರದಲ್ಲಿರಿಸಲಾಗಿದೆ.

ಪ್ರಸ್ತುತ ಸದರಿ ವಿಷಯವನ್ನು ಪರಿಶೀಲಿಸಿದ ಸರ್ಕಾರ ಶ್ರೀ ಕೆ. ಆನಂದಕೃಷ್ಣ, ಚೀಫ್ ಜನರಲ್ ಮ್ಯಾನೇಜರ್, ಕರ್ನಾಟಕ ರಾಜ್ಯ ಬೀಜ ನಿಗಮ (ನಿ) ಹುದ್ದೆಗೆ ನೇಮಿಸಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕೃತೋಇ 109 ಕೃಪಸೇ 2010 (ಭಾ) ಬೆಂಗಳೂರು, ದಿನಾಂಕ: 21-02-2011.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಕೆ. ಆನಂದಕೃಷ್ಣ, ಚೀಫ್ ಜನರಲ್ ಮ್ಯಾನೇಜರ್ ಹಾಗೂ ಪ್ರಭಾರಿ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ರಾಜ್ಯ ಬೀಜ ನಿಗಮ (ನಿ) ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ರಾಜ್ಯ ಬೀಜ ನಿಗಮ (ನಿ)ದ ವ್ಯವಸ್ಥಾಪಕ ನಿರ್ದೇಶಕರನ್ನಾಗಿ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ. ಕೆ. ಗುರಾಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಇಲಾಖೆ

ಪಿ.ಆರ್. 542

## ಕಂದಾಯ ಸಚಿವಾಲಯ

**ವಿಷಯ :** ಆಸರೆ ಯೋಜನೆಯಡಿಯಲ್ಲಿ ಮನೆಗಳ ನಿರ್ಮಾಣಕ್ಕಾಗಿ ಜಿಲ್ಲಾಧಿಕಾರಿ, ಬಿಜಾಪುರ ಜಿಲ್ಲೆ ರವರಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಕಂಇ 79 ಟಿಎನ್‌ಆರ್ 2010 ದಿನಾಂಕ : 29-03-2010, 25-6-2010 ಮತ್ತು 13-08-2010.
2. ಮೈಸೂರು ನಾಗರೀಕರ ವೇದಿಕೆ, ಜೆಎಸ್‌ಎಸ್ ಮಹಾವಿದ್ಯಾಪೀಠ, ಮೈಸೂರು ಇವರ ಪತ್ರ ಸಂಖ್ಯೆ : ಎಮ್ ಸಿಎಫ್/ಎಡಿಎಮ್/1/2009-10 ದಿನಾಂಕ : 14-12-2010.

**ಪ್ರಸ್ತಾವನೆ :**

ಮೈಸೂರು ನಾಗರೀಕರ ವೇದಿಕೆ, ಜೆಎಸ್‌ಎಸ್ ಮಹಾವಿದ್ಯಾಪೀಠ, ಮೈಸೂರು ಇವರಿಗೆ ಬಾಗಲಕೋಟೆ, ಬಿಜಾಪುರ ಮತ್ತು ಗದಗ ಜಿಲ್ಲೆಗಳಲ್ಲಿ ಆಸರೆ ಯೋಜನೆಯಡಿಯಲ್ಲಿ ಒಟ್ಟು 1215 ಮನೆಗಳ ನಿರ್ಮಾಣ ಕಾರ್ಯವನ್ನು ವಹಿಸಿದ್ದು, ಮೇಲೆ ಓದಲಾದ (1) ರ ಸರ್ಕಾರದ ಆದೇಶಗಳಲ್ಲಿ ಇದಕ್ಕಾಗಿ ಈಗಾಗಲೇ ಒಟ್ಟು ರೂ. 43419718-00 ಗಳನ್ನು ಜಿಲ್ಲಾಧಿಕಾರಿ, ಬಾಗಲಕೋಟೆ ಇವರಿಗೆ ಬಿಡುಗಡೆ ಮಾಡಲಾಗಿತ್ತು.

ಮೇಲೆ ಓದಲಾದ (2) ರ ಪತ್ರದಲ್ಲಿ, ಮೈಸೂರು ನಾಗರೀಕರ ವೇದಿಕೆ, ಜೆಎಸ್‌ಎಸ್ ಮಹಾವಿದ್ಯಾಪೀಠ, ಮೈಸೂರು ಇವರು ಆಸರೆ ಮನೆಗಳ ನಿರ್ಮಾಣ ಕಾರ್ಯ ಮುಕ್ತಾಯಗೊಳಿಸಲು ಇನ್ನೂ ರೂ. 3,22,55,570/- ಗಳನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

ಕಡತ ಸಂಖ್ಯೆ : ಕಂಇ 79 ಟಿಎನ್‌ಆರ್ 2010 ರಲ್ಲಿ ಮಾನ್ಯ ಮುಖ್ಯ ಮಂತ್ರಿಗಳು ರೂ. 3.22 ಕೋಟಿಗಳ ಹಣವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿರುತ್ತಾರೆ.

ಮೇಲ್ಕಂಡ ಹಿನ್ನೆಲೆಯಲ್ಲಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 79 ಟಿಎನ್‌ಆರ್ 2010, ಬೆಂಗಳೂರು, ದಿನಾಂಕ: 18-02-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆಸರೆ ಯೋಜನೆ ಅಡಿಯಲ್ಲಿ ಬಾಗಲಕೋಟೆ, ಬಿಜಾಪುರ ಹಾಗೂ ಗದಗ ಜಿಲ್ಲೆಗಳಲ್ಲಿ ಮನೆಗಳ ನಿರ್ಮಾಣ ಕಾರ್ಯಕ್ಕಾಗಿ ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ, ಬಿಜಾಪುರ ಇವರಿಗೆ ರೂ. 3.22 ಕೋಟಿ (ರೂಪಾಯಿ ಮೂರು ಕೋಟಿ

ಇಪ್ಪತ್ತೆರೆಡು ಲಕ್ಷಗಳು ಮಾತ್ರ) ಗಳ ಅನುದಾನವನ್ನು ಲೆಕ್ಕ ಶೀರ್ಷಿಕೆ 8235–00–111–0–02 'Public Contributions to the Calamity Relief ಅಡಿಯಲ್ಲಿ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ, ಬಿಜಾಪುರ ಇವರು ಮೇಲೆ ತಿಳಿಸಿರುವ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಪೇಯೀಸ್ ರಸೀದಿ (ಸಿಟಿಎಸ್–8) ಬಿಲ್ಲು ತಯಾರಿಸಿ, ಮೇಲು ಸಹಿ ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಲು ಸೂಚಿಸಿದೆ.

ಈ ಅನುದಾನವನ್ನು ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ ಇವರು ಬಾಗಲಕೋಟೆ, ಬಿಜಾಪುರ ಮತ್ತು ಗದಗ ಜಿಲ್ಲೆಗಳಲ್ಲಿ ಪ್ರವಾಹದಿಂದ ಪೀಡಿತವಾದ ಗ್ರಾಮಗಳಿಗೆ ಸಂಬಂಧಿಸಿದಂತೆ ಸ್ಥಳಾಂತರಗೊಳ್ಳಲಿರುವ ಗ್ರಾಮಗಳಲ್ಲಿ ಆಸರೆ ಯೋಜನೆ ಅಡಿಯಲ್ಲಿ ಮನೆಗಳನ್ನು ಕಟ್ಟಿಸುತ್ತಿರುವ ಮೈಸೂರು ನಾಗರೀಕರ ವೇದಿಕೆ, ಜೆಎಸ್ಎಸ್ ಮಹಾವಿದ್ಯಾಪೀಠ, ಮೈಸೂರು ಇವರಿಗೆ ಅವಶ್ಯಕತೆಗನುಗುಣವಾಗಿ ಬಿಡುಗಡೆ ಮಾಡುವುದು.

ಈ ಹಿಂದೆ ಬಿಡುಗಡೆ ಮಾಡಿದ್ದ ಅನುದಾನಕ್ಕೆ ಹಾಗೂ ಈಗ ಬಿಡುಗಡೆ ಮಾಡುತ್ತಿರುವ ಅನುದಾನಕ್ಕೆ ಹಣ ಬಳಕೆ ಪತ್ರವನ್ನು ವೆಚ್ಚದ ವಿವರಗಳೊಂದಿಗೆ ಸಲ್ಲಿಸುವುದು ಹಾಗೂ ಭೌತಿಕ ಹಾಗೂ ಆರ್ಥಿಕ ಪ್ರಗತಿಯ ವಿವರಗಳನ್ನು ಸಹ ಸಲ್ಲಿಸುವುದು.

ಈ ಮೊತ್ತವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಉಪಯೋಗಿಸತಕ್ಕದ್ದು.

ಈ ಆದೇಶವನ್ನು ಕಡತ ಸಂಖ್ಯೆ : ಕಂಇ 79 ಟಿಎನ್ಆರ್ 2010 ರಲ್ಲಿ ಮಾನ್ಯ ಮುಖ್ಯ ಮಂತ್ರಿಯವರು ನೀಡಿರುವ ಅನುಮೋದನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 543

**ಟಿ. ಗಂಗಾಧರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿ.ನಿ. & ಸೇವೆ–2).

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೇವನಹಳ್ಳಿ ತಾಲ್ಲೂಕು, ದೇವನಹಳ್ಳಿ ಗ್ರಾಮದ ಸ. ನಂ. 304 ರಲ್ಲಿ 1.01 ಎಕರೆ ಹಾಗೂ ಸ. ನಂ. 305 ರಲ್ಲಿ 1.22 ಎಕರೆ, ಒಟ್ಟು 2.23 ಎಕರೆ ಸರ್ಕಾರಿ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ಇವರಿಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ರವರ ಪತ್ರ ಸಂಖ್ಯೆ : ಎಲ್ಎನ್‌ಡಿ/ಸಿಆರ್/81/ 09–10, ದಿನಾಂಕ : 16–07–2010.

**ಪ್ರಸ್ತಾವನೆ :**

ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ಇವರು ಮೇಲೆ ಓದಲಾದ ದಿನಾಂಕ : 16–07–2010 ರ ಪತ್ರದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೇವನಹಳ್ಳಿ ತಾಲ್ಲೂಕು, ದೇವನಹಳ್ಳಿ ಗ್ರಾಮದ ಸ. ನಂ. 304 ರಲ್ಲಿ 1.01 ಎಕರೆ ಹಾಗೂ ಸ. ನಂ. 305 ರಲ್ಲಿ 1.22 ಎಕರೆ, ಒಟ್ಟು 2.23 ಎಕರೆ ಸರ್ಕಾರಿ ಜಮೀನನ್ನು ಬಿ.ಎಂ.ಟಿ.ಸಿ.ಗೆ ಸಾರಿಗೆ ಸೌಕರ್ಯಗಳ ಅಭಿವೃದ್ಧಿಗಾಗಿ ಮಂಜೂರು ಮಾಡುವ ಬಗ್ಗೆ ಸರ್ಕಾರದ ಆದೇಶ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಾದೇಶಿಕ ಆಯುಕ್ತರ ವರದಿಯನ್ವಯ ದೇವನಹಳ್ಳಿ ತಾಲ್ಲೂಕು, ದೇವನಹಳ್ಳಿ ಗ್ರಾಮದ ಸ.ನಂ. 304 ರಲ್ಲಿ 1.08 ಎಕರೆ ಜಮೀನಿದ್ದು, ಸರ್ಕಾರಿ ಕಣ ಎಂದು ವರ್ಗೀಕೃತವಾಗಿರುತ್ತದೆ. ಈ ಪೈಕಿ 0.07 ಗುಂಟೆ ಜಮೀನು ರಸ್ತೆಗೆ ಹೋಗಿದ್ದು, 1.01 ಎಕರೆ ಜಮೀನು ಉಳಿದಿರುತ್ತದೆ. ಸ. ನಂ. 305 ರಲ್ಲಿ 2.35 ಎಕರೆ ಜಮೀನಿದ್ದು, ಇದು ಸಹ ಸರ್ಕಾರಿ ಎಂದು ವರ್ಗೀಕೃತವಾಗಿರುತ್ತದೆ. ಈ ಪೈಕಿ ರಸ್ತೆ, ವಾಸದ ಮನೆಗಳು ಹಾಗೂ ಅಶ್ವಥ ಕಟ್ಟೆಗಾಗಿ ಬಳಕೆಯಾಗಿರುವ ಜಮೀನು ಹೊರತುಪಡಿಸಿ 1.22 ಎಕರೆ ಜಮೀನು ಖಾಲಿ ಇರುತ್ತದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 690 ಎಲ್‌ಜಿಬಿ 2010, ಬೆಂಗಳೂರು, ದಿನಾಂಕ: 21–02–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೇವನಹಳ್ಳಿ ತಾಲ್ಲೂಕು, ದೇವನಹಳ್ಳಿ ಗ್ರಾಮದ ಸ. ನಂ. 304 ರಲ್ಲಿ 1.01 ಎಕರೆ ಹಾಗೂ ಸ. ನಂ. 305 ರಲ್ಲಿ 1.22 ಎಕರೆ, ಒಟ್ಟು 2 ಎಕರೆ 23 ಗುಂಟೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಸಾರಿಗೆ ಸೌಕರ್ಯಗಳ ಅಭಿವೃದ್ಧಿಗಾಗಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ರ ನಿಯಮ 20 (1) (ಸಿ) ರನ್ವಯ ಪ್ರಸಕ್ತ ಮಾರುಕಟ್ಟೆ ದರದ ಶೇಕಡ 50 ರಷ್ಟು ದರ ವಿಧಿಸಿ ಮಂಜೂರು ಮಾಡಲು ಸರ್ಕಾರವು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 671 ವೆಚ್ಚ–7/2010, ದಿನಾಂಕ : 08–10–2010 ರಲ್ಲಿ ನೀಡಿದ ಸಹಮತಿಯನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 544

**ಗೀತಾ ರಮೇಶ್**

ಸರ್ಕಾರದ ಉಪ ಕಾರ್ಯದರ್ಶಿ,

ಕಂದಾಯ ಇಲಾಖೆ, (ಭೂ. ಮಂ ಮತ್ತು ಭೂ ಕಂ).

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಶ್ರೀನಿವಾಸ ಎಜುಕೇಷನಲ್ ಅಂಡ್ ಚಾರಿಟೆಬಲ್ ಟ್ರಸ್ಟ್ ಇವರಿಗೆ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಚಿಕ್ಕಸಂದ್ರ ಗ್ರಾಮದ ಸ.ನಂ. 15 ರಲ್ಲಿ 13 ಎಕರೆ ಜಮೀನನ್ನು ಗುತ್ತಿಗೆಗೆ ಬದಲಾಗಿ ಕ್ರಯಕ್ಕೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಪತ್ರ ಸಂಖ್ಯೆ : ಆರ್‌ಡಿ 178 ಎಲ್‌ಜಿಬಿ 2002, ದಿನಾಂಕ : 16-04-2003.
2. ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಅಧಿಕೃತ ಜ್ಞಾಪನ ಸಂಖ್ಯೆ : ಎಲ್‌ಎನ್‌ಡಿ (ಎನ್) ಸಿಆರ್ 66/2002-03, ದಿನಾಂಕ : 21-04-2003.
3. ಅಧ್ಯಕ್ಷರು, ಶ್ರೀ ಶ್ರೀನಿವಾಸ್ ಎಜುಕೇಷನಲ್ ಅಂಡ್ ಚ್ಯಾರಿಟೆಬಲ್ ಟ್ರಸ್ಟ್ ಇವರ ಮನವಿಯ ದಿನಾಂಕ : 02-03-2010..
4. ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ : ಎಲ್‌ಎನ್‌ಡಿ (ಎನ್) ಸಿಆರ್ 66/2002-03, ದಿನಾಂಕ : 22-05-2010,

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿನ ಸರ್ಕಾರದ ಪತ್ರದ ದಿ : 16-04-2003 ರಲ್ಲಿ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಚಿಕ್ಕಸಂದ್ರ ಗ್ರಾಮದ ಸ. ನಂ. 15 ರಲ್ಲಿ 15 ಎಕರೆ ಮತ್ತು ಚಿಕ್ಕಬಾಣಾವರ ಗ್ರಾಮದ ಸ. ನಂ. 57 ರಲ್ಲಿ 10 ಎಕರೆ ಜಮೀನನ್ನು 30 ವರ್ಷಗಳ ಗುತ್ತಿಗೆ ಆಧಾರದ ಮೇಲೆ ಶ್ರೀ ಶ್ರೀನಿವಾಸ ಎಜುಕೇಷನಲ್ ಅಂಡ್ ಚ್ಯಾರಿಟೆಬಲ್ ಟ್ರಸ್ಟ್ (ರಿ), ಬೆಂಗಳೂರು ಇವರಿಗೆ ವೈದ್ಯಕೀಯ ಕಾಲೇಜು ಸ್ಥಾಪನೆಗಾಗಿ ಮಂಜೂರು ಮಾಡಲು ಸರ್ಕಾರದ ಪೂರ್ವಾನುಮೋದನೆ ನೀಡಲಾಗಿರುತ್ತದೆ. ಅದರಂತೆ ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿನ ಅಧಿಕೃತ ಜ್ಞಾಪನ ದಿ : 21-04-2003 ರಲ್ಲಿ ಹಲವು ಷರತ್ತುಗಳನ್ನು ವಿಧಿಸಿ ಮಂಜೂರಾತಿ ಆದೇಶವನ್ನು ನೀಡಿರುತ್ತಾರೆ.

2. ಅಧ್ಯಕ್ಷರು, ಶ್ರೀ ಶ್ರೀನಿವಾಸ ಎಜುಕೇಷನಲ್ ಅಂಡ್ ಚ್ಯಾರಿಟೆಬಲ್ ಟ್ರಸ್ಟ್ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿನ ದಿ : 02-03-2010 ರ ಪತ್ರದಲ್ಲಿ ಸದರಿ ಜಮೀನನ್ನು ಅಭಿವೃದ್ಧಿ ಪಡಿಸಲು ಸುಮಾರು ಕೋಟಿಗಳಷ್ಟು ಹಣವನ್ನು ಖರ್ಚು ಮಾಡಿರುವುದಾಗಿ ತಿಳಿಸಿ, ಪ್ರಸ್ತುತ ವೈದ್ಯಕೀಯ ಕಾಲೇಜು, ವಿದ್ಯಾರ್ಥಿ ನಿಲಯ ಮತ್ತು ಸಾರ್ವಜನಿಕ ಭೋದನ ಆಸ್ಪತ್ರೆ ನಿರ್ಮಾಣ ಮಾಡುತ್ತಿರುವುದಾಗಿ ತಿಳಿಸಿ, ಚಿಕ್ಕಸಂದ್ರ ಗ್ರಾಮದ ಸ.ನಂ. 15 ರಲ್ಲಿ 13 ಎಕರೆ ಜಮೀನನ್ನು ರಿಯಾಯಿತಿ ದರದಲ್ಲಿ ಕ್ರಯಕ್ಕೆ ಮಂಜೂರು ಮಾಡುವಂತೆ ಕೋರಿರುತ್ತಾರೆ.

3. ಈ ಬಗ್ಗೆ ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿನ ದಿ : 22-05-2010 ರ ಪತ್ರದಲ್ಲಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿ, ಚಿಕ್ಕಸಂದ್ರ ಗ್ರಾಮದ ಸ.ನಂ. 15 ರಲ್ಲಿ ಹಾಲಿ ವೈದ್ಯಕೀಯ ಕಾಲೇಜು ಕಟ್ಟಡ ನಿರ್ಮಾಣ ಮಾಡುತ್ತಿದ್ದು, ಸದರಿ ಜಮೀನು ಚಿಕ್ಕಬಾಣಾವರ ಗ್ರಾಮದ ಸ. ನಂ. 57 ರ ಜಮೀನಿನ ಪಕ್ಕದಲ್ಲಿರುವುದಾಗಿ ತಿಳಿಸಿರುತ್ತಾರೆ. ಸದರಿ ಸಂಸ್ಥೆಗೆ ಈಗಾಗಲೇ ಈ ಜಮೀನುಗಳನ್ನು ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿರುವುದರಿಂದ, ಮಂಜೂರು ಮಾಡಿರುವ 15 ಎಕರೆ ಜಮೀನಿನ ಪೈಕಿ ರಸ್ತೆಗೆ ಬಳಕೆಯಾಗಿರುವ ಜಮೀನನ್ನು ಹೊರತುಪಡಿಸಿ, 13 ಎಕರೆ ಜಮೀನನ್ನು ಗುತ್ತಿಗೆಗೆ ಬದಲಾಗಿ ಕ್ರಯಕ್ಕೆ ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

4. ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 246 ಎಲ್‌ಜಿಬಿ 2009, ಬೆಂಗಳೂರು, ದಿನಾಂಕ: 21-02-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಚಿಕ್ಕಸಂದ್ರ ಗ್ರಾಮದ ಸ. ನಂ. 15 ರಲ್ಲಿ ಸಾರ್ವಜನಿಕ ರಸ್ತೆಗಾಗಿ ಉಪಯೋಗವಾಗಿರುವ 2 ಎಕರೆ ಜಮೀನನ್ನು ಹೊರತುಪಡಿಸಿ, 13 ಎಕರೆ ಜಮೀನನ್ನು ಶ್ರೀ ಶ್ರೀನಿವಾಸ ಎಜುಕೇಷನಲ್ ಅಂಡ್ ಚಾರಿಟೆಬಲ್ ಟ್ರಸ್ಟ್ ಇವರಿಗೆ ಗುತ್ತಿಗೆಗೆ ಬದಲಾಗಿ ಪ್ರಚಲಿತ ಮಾರ್ಗಸೂಚಿ ಬೆಲೆಯ ಶೇ. 50 ರಷ್ಟು ದರ ಹಾಗೂ ನಿಯಮಾನುಸಾರ ಇತರೆ ಶುಲ್ಕ ವಿಧಿಸಿ ಮಂಜೂರು ಮಾಡಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 545

**ಗೀತಾ ರಮೇಶ್**
ಸರ್ಕಾರದ ಉಪ ಕಾರ್ಯದರ್ಶಿ,
ಕಂದಾಯ ಇಲಾಖೆ, (ಭೂ. ಮಂ ಮತ್ತು ಭೂ ಕಂ).

## ಕಂದಾಯ ಸಚಿವಾಲಯ

**ವಿಷಯ :** ಸರ್ಕಾರದ ಉಪಕಾರ್ಯದರ್ಶಿ, ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ & ಸೇವೆಗಳು) ಇವರ ವಾಹನ ಸಂ. ಕೆಎ 01 ಜಿಎ 1011 ಕ್ಕೆ ಹೊಸದಾಗಿ ಬ್ಯಾಟರಿ ಅಳವಡಿಸಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** ಮೆ॥ ಎಕ್ಸೈಡ್ ಬ್ಯಾಟರೀಸ್, ಬೆಂಗಳೂರು, ಇವರ ದಿನಾಂಕ : 28-12-2010 ರ ಟ್ಯಾಕ್ಸ್ ಇನ್ವಾಯ್ಸ್.

**ಪ್ರಸ್ತಾವನೆ :**

ಸರ್ಕಾರದ ಉಪಕಾರ್ಯದರ್ಶಿ, ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ ಮತ್ತು ಸೇವೆಗಳು) ಇವರ ಅಧಿಕೃತ ವಾಹನ ಸಂ. 01 ಜಿಎ 1011 ಕ್ಕೆ ಹಾಲಿ ಇರುವ ಬ್ಯಾಟರಿಯು ದುರ್ಬಲವಾಗಿದ್ದು, ಹೊಸದಾಗಿ ಬ್ಯಾಟರಿ ಅಳವಡಿಸಬೇಕೆಂದು ಆರ್.ಟಿ.ಓ ರವರು ದೃಢೀಕರಿಸಿರುವ ಹಿನ್ನೆಲೆಯಲ್ಲಿ ಮತ್ತು ಮೇಲೆ ಓದಲಾದ ಮೆ॥ ಎಕ್ಸೈಡ್ ಬ್ಯಾಟರಿಸ್, ದಿ ಬ್ಯಾಟರಿ ಹೌಸ್, ನಂ. 77, ಮಿಲ್ಲರ್ಸ್ ಪಾಯಿಂಟ್, ಮಿಲ್ಲರ್ಸ್ ರೋಡ್, ವಸಂತನಗರ, ಬೆಂಗಳೂರು ಇವರು EM 75R – Exide Max (Model) 2JO/92046 ಸಂಖ್ಯೆಯ ಒಂದು ಹೊಸ ಬ್ಯಾಟರಿಯನ್ನು ರೂ. 5275/- ಅಳವಡಿಸಲು ಟ್ಯಾಕ್ಸ್ ಇನ್ವಾಯ್ಸ್ ಸಲ್ಲಿಸಿರುತ್ತಾರೆ.

ಸರ್ಕಾರವು ಉಪಕಾರ್ಯದರ್ಶಿ, ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ ಮತ್ತು ಸೇವೆಗಳು) ಇವರ ಅಧಿಕೃತ ವಾಹನ ಸಂ. 01 ಜಿಎ 1011 ಕ್ಕೆ ಹಾಲಿ ಇರುವ ಬ್ಯಾಟರಿಯನ್ನು ಬದಲಾಯಿಸಿ, ರೂ. 5275/–ರ ವೆಚ್ಚದಲ್ಲಿ ಹೊಸದಾಗಿ ಬ್ಯಾಟರಿ ಅಳವಡಿಸಲು ಸರ್ಕಾರವು ತೀರ್ಮಾನಿಸಿರುತ್ತದೆ. ಆದ್ದರಿಂದ, ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 341 ಟಿಎನ್‌ಆರ್ 2010, ಬೆಂಗಳೂರು, ದಿನಾಂಕ: 19–02–2011**

ಸರ್ಕಾರದ ಉಪಕಾರ್ಯದರ್ಶಿ, ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ ಮತ್ತು ಸೇವೆಗಳು) ಇವರ ಅಧಿಕೃತ ವಾಹನ ಸಂಖ್ಯೆ 01 ಜಿಎ 1011 ಕ್ಕೆ ಪ್ರಸ್ತಾವನೆಯಲ್ಲಿ ತಿಳಿಸಿರುವ ಬ್ಯಾಟರಿ ಖರೀದಿಸಿದ ಬಾಬ್ತು ರೂ. 5275/– (ಐದು ಸಾವಿರದ ಎರಡು ನೂರ ಎಪ್ಪತ್ತೈದು ರೂಪಾಯಿಗಳು ಮಾತ್ರ) ಗಳನ್ನು ಮೆ॥ ಎಕ್ಸೈಡ್ ಬ್ಯಾಟರೀಸ್, ದಿ ಬ್ಯಾಟರಿ ಹೌಸ್, ನಂ. 77, ಮಿಲ್ಲರ್ಸ್ ಪಾಯಿಂಟ್, ಮಿಲರ್ಸ್ ರೋಡ್, ವಸಂತನಗರ, ಬೆಂಗಳೂರು ಇವರಿಗೆ ಪಾವತಿ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2052 – Secretarit General Services-09-Sectt-01-KGS-195-Transport Expenses ಇದರಡಿಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 546

**ಟಿ. ಗಂಗಾಧರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿ. ನಿ & ಸೇವೆಗಳು–2)

## ಕಂದಾಯ ಸಚಿವಾಲಯ

**ವಿಷಯ :** ನಂಜನಗೂಡು ಶ್ರೀ ರಾಘವೇಂದ್ರಸ್ವಾಮಿ ಮಠದ ಉತ್ತರಾಧಿಕಾರಿಯಾಗಿ ಶ್ರೀ ಶ್ರೀ ಸುಯತೀಂದ್ರ ತೀರ್ಥ ಶ್ರೀಪಾದಂಗಳವರು ಆಯ್ಕೆ ಹೊಂದಿದ ಬಗ್ಗೆ ಮಾನ್ಯತೆ ನೀಡುವ ಕುರಿತು.

**ಓದಲಾಗಿದೆ :** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ : ಎಡಿಎಂ 8 ಸಿಆರ್ 208/10–11/ ದಿನಾಂಕ : 19–01–2011.

**ಪ್ರಸ್ತಾವನೆ :**

ನಂಜನಗೂಡು ಶ್ರೀ ರಾಘವೇಂದ್ರಸ್ವಾಮಿಗಳ ಮಠದ ಪೀಠಾಧಿಪತಿಗಳಾದ ಶ್ರೀ ಶ್ರೀ ಶ್ರೀ ಸುಶೀಮೀಂದ್ರ ತೀರ್ಥ ಶ್ರೀಪಾದಂಗಳವರು ತಮ್ಮ ಉತ್ತರಾಧಿಕಾರಿಗಳಾಗಿ ಶ್ರೀ ಶ್ರೀ ಸುಯತೀಂದ್ರ ತೀರ್ಥ ಶ್ರೀ ಪಾದಂಗಳವರನ್ನು ರಾಯಚೂರಿನಲ್ಲಿ ದಿನಾಂಕ 3–7–2006 ರಂದು ನೇಮಕ ಮಾಡಿದ್ದು, ನಂತರ ಶ್ರೀ ಶ್ರೀ ಶ್ರೀ ಸುಶೀಮೀಂದ್ರ ತೀರ್ಥ ಶ್ರೀಪಾದಂಗಳವರು ದಿನಾಂಕ 11–4–2009 ರಂದು ವೃಂದಾವನಸ್ಥರಾಗಿರುತ್ತಾರೆ. ಶ್ರೀ ಮಠದ ಚಿಕ್ಕಪೀಠಾಧಿಪತಿಗಳಾಗಿದ್ದ ಶ್ರೀ ಶ್ರೀ ಸುಯತೀಂದ್ರ ತೀರ್ಥ ಶ್ರೀಪಾದಂಗಳವರು ಶ್ರೀಮಠದ ಪೀಠಾಧಿಪತಿಗಳಾಗಿ ಪೂರ್ಣ ಅಧಿಕಾರ ವಹಿಸಿಕೊಂಡಿದ್ದಾರೆ ಹಾಗೂ ಪ್ರಸ್ತುತ ಪೀಠಾಧಿಪತಿಗಳಾದ ಶ್ರೀ ಶ್ರೀ ಸುಯತೀಂದ್ರ ತೀರ್ಥ ಶ್ರೀಪಾದಂಗಳವರನ್ನು ನೇಮಕ ಮಾಡಿರುವ ಬಗ್ಗೆ ಸರ್ಕಾರದಿಂದ ಅಧಿಕೃತ ಆದೇಶವನ್ನು ನೀಡುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲು ನಂಜನಗೂಡು ಶ್ರೀ ರಾಘವೇಂದ್ರಸ್ವಾಮಿಗಳ ಮಠದ ಪೀಠಾಧಿಪತಿಗಳಾದ ಶ್ರೀ ಶ್ರೀ ಸುಯತೀಂದ್ರತೀರ್ಥ ಶ್ರೀ ಪಾದಂಗಳವರ ಪವರ್ ಆಫ್ ಅಟಾರ್ನಿ ಹೋಲ್ಡರ್‌ರಾದ ಶ್ರೀ ಕೆ. ಗುಂಡಾಚಾರ್ಯರವರು ಕೋರಿರುತ್ತಾರೆಂದು ತಿಳಿಸುತ್ತಾ, ಅದರಂತೆ ನಂಜನಗೂಡು ಶ್ರೀ ರಾಘವೇಂದ್ರ ಮಠದ ಉತ್ತರಾಧಿಕಾರಿಯಾಗಿ ಶ್ರೀ ಶ್ರೀ ಸುಯತೀಂದ್ರತೀರ್ಥ ಶ್ರೀ ಪಾದಂಗಳವರು ಆಯ್ಕೆ ಹೊಂದಿದ ಬಗ್ಗೆ ಮಾನ್ಯತೆ ನೀಡುವಂತೆ ಮೇಲೆ ಓದಲಾದ ಪತ್ರದಲ್ಲಿ ಧಾರ್ಮಿಕ ದತ್ತಿ ಆಯುಕ್ತರು ಕೋರಿರುತ್ತಾರೆ.

ಧಾರ್ಮಿಕ ದತ್ತಿ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 11 ಮುಸೇವಿ 2011, ಬೆಂಗಳೂರು, ದಿನಾಂಕ: 18–02–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ನಂಜನಗೂಡು ಶ್ರೀ ರಾಘವೇಂದ್ರಸ್ವಾಮಿಗಳ ಮಠದ ಉತ್ತರಾಧಿಕಾರಿಯಾಗಿ ಶ್ರೀ ಶ್ರೀ ಸುಯತೀಂದ್ರತೀರ್ಥ ಶ್ರೀಪಾದಂಗಳವರು ಆಯ್ಕೆ ಹೊಂದಿದ ಬಗ್ಗೆ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997 ರ ಕಾಯ್ದೆಗೆ ತಿದ್ದುಪಡಿ ತರುವ ಬಗ್ಗೆ ಉನ್ನತ ಮಟ್ಟದ ಸಮಿತಿಯು ನೀಡಿದ ವರದಿಯನ್ವಯ ತಿದ್ದುಪಡಿ ತರುವ ಷರತ್ತಿಗೊಳಪಟ್ಟು ಸರ್ಕಾರದಿಂದ ಮಾನ್ಯತೆ ನೀಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 547

**ಎಲ್. ಎಸ್. ಶ್ರೀಕಂಠಬಾಬು**

ಪೀಠಾಧಿಕಾರಿ

ಕಂದಾಯ ಇಲಾಖೆ (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎಂ. ಪಿ. ಮಾರುತಿ, ತಹಶೀಲ್ದಾರ್, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರ ವಿರುದ್ಧದ ಶಿಸ್ತು ಕ್ರಮ ಕುರಿತು–ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1. ರಾಜ್ಯ ಚುನಾವಣಾ ಆಯೋಗ, ಕರ್ನಾಟಕ, ಬೆಂಗಳೂರು ಇವರ ಪತ್ರ ಸಂಖ್ಯೆ : ರಾಚುಆ/265/ಇಜಿಪಿ/2010 ದಿನಾಂಕ : 20–07–2010.
2. ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ : ಕಂಇ 47 ಎಡಿಇ 2010 ದಿನಾಂಕ : 16–09–2010.
3. ಶ್ರೀ ಎಂ. ಪಿ. ಮಾರುತಿ, ತಹಶೀಲ್ದಾರ್, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಲಿಖಿತ ಹೇಳಿಕೆ ದಿನಾಂಕ : 08–10–2010.

**ಪ್ರಸ್ತಾವನೆ :**

ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲ್ಲೂಕು, ಉಡುವಳ್ಳಿ ಗ್ರಾಮ ಪಂಚಾಯಿತಿಯ 6–ಹಿಂಡಸಕಟ್ಟೆ ಎ. ಕೆ. ಹಟ್ಟಿ ಕ್ಷೇತ್ರಕ್ಕೆ ಹಿಂದುಳಿದ ವರ್ಗ–ಎ ಸಾಮಾನ್ಯ ಸ್ಥಾನಕ್ಕೆ ಶ್ರೀ ಆರ್. ಈರಪ್ಪರವರನ್ನು ಈ ಸ್ಥಾನಕ್ಕೆ ಒಬ್ಬರೇ ಸ್ಪರ್ಧಿಸಿರುವರೆಂದು ಭಾವಿಸಿ, ಇವರನ್ನು ಅವಿರೋಧ ಆಯ್ಕೆಯಾಗಿರುತ್ತಾರೆಂದು

ಘೋಷಣೆ ಮಾಡಿರುವ ಚುನಾವಣಾಧಿಕಾರಿಗಳ ವಿರುದ್ಧ ಹಾಗೂ ತಹಶೀಲ್ದಾರ್, ಹಿರಿಯೂರು ತಾಲ್ಲೂಕು ಇವರು ಮೇಲ್ಕಂಡ ಪ್ರಕ್ರಿಯೆಯಲ್ಲಿ ಪ್ರಪತ್ರಗಳನ್ನು ಮತ್ತು ಮಾಹಿತಿಯನ್ನು ಖುದ್ದಾಗಿ ಪರಿಶೀಲಿಸಿ ಚುನಾವಣಾ ಕರ್ತವ್ಯ ಲೋಪವಾಗದಂತೆ, ಚುನಾವಣಾಧಿಕಾರಿಗಳಿಗೆ ಮಾರ್ಗದರ್ಶನ ನೀಡುವ ಮೂಲಕ ತಮ್ಮ ಹೊಣೆಗಾರಿಕೆಯನ್ನು ನಿರ್ವಹಿಸಬೇಕಾಗಿದ್ದು, ಅವರು ತಪ್ಪು ಮಾರ್ಗದರ್ಶನ ನೀಡಿ ಚುನಾವಣಾಧಿಕಾರಿಗಳು ಕಾನೂನು ಬಾಹಿರವಾಗಿ ಅವಿರೋಧ ಆಯ್ಕೆಯನ್ನು ಘೋಷಿಸಲು ಕಾರಣರಾಗಿರುವುದರಿಂದ ಇವರ ವಿರುದ್ಧ ನಿಯಮಾನುಸಾರ ದೋಷಾರೋಪಣ ಪಟ್ಟಿ ತಯಾರಿಸಿ ಆಯೋಗಕ್ಕೆ ಸಲ್ಲಿಸುವಂತೆ ಚಿತ್ರದುರ್ಗ ಜಿಲ್ಲಾಧಿಕಾರಿಗಳಿಗೆ ತಿಳಿಸಲಾಗಿದ್ದು, ಅದರಂತೆ ಜಿಲ್ಲಾಧಿಕಾರಿಗಳು ಹಿರಿಯೂರು ತಹಶೀಲ್ದಾರ್ ರವರ ವಿರುದ್ಧ ಕರಡು ದೋಷಾರೋಪಣಾ ಪಟ್ಟಿಯನ್ನು ಅನುಬಂಧ 1 ರಿಂದ 4 ರವರೆಗೆ ತಯಾರಿಸಿ ಆಯೋಗಕ್ಕೆ ಸಲ್ಲಿಸಿದ್ದು, ಆಯೋಗವು ಸದರಿ ದೋಷಾರೋಪಣಾ ಪಟ್ಟಿ ಹಾಗೂ ಅನುಬಂಧಗಳನ್ನು ಕಂದಾಯ ಇಲಾಖೆಗೆ ಸೂಕ್ತ ಕ್ರಮಕ್ಕಾಗಿ ಕಳುಹಿಸುತ್ತಾ, ಕೈಗೊಂಡ ಕ್ರಮದ ಬಗ್ಗೆ ಆಯೋಗಕ್ಕೆ ಮಾಹಿತಿ ನಿಡುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ : (1) ರ ದಿನಾಂಕ : 20–7–2010 ರ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ರಾಜ್ಯ ಚುನಾವಣಾ ಆಯೋಗ, ಕರ್ನಾಟಕ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪತ್ರವನ್ನು ಪರಿಶೀಲಿಸಿ, ಶ್ರೀ ಎಂ. ಪಿ. ಮಾರುತಿ, ತಹಶೀಲ್ದಾರ್, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಕುರಿತಂತೆ, ಸದರಿಯವರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ : (2) ದಿನಾಂಕ : 16–09–2010 ರ ಸರ್ಕಾರದ ಕಾರಣ ಕೇಳುವ ನೋಟೀಸಿನೊಂದಿಗೆ ರಾಜ್ಯ ಚುನಾವಣಾ ಆಯೋಗವು ಕಳುಹಿಸಿದ ದೋಷಾರೋಪಣೆ ಪಟ್ಟಿಯ ಅನುಬಂಧ 1 ರಿಂದ 4 ಗಳನ್ನು ಜಾರಿಗೊಳಿಸಿ, ಸದರಿ ನೋಟೀಸು ಸ್ವೀಕರಿಸಿದ 15 ದಿನಗಳೊಳಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ತಪ್ಪಿದಲ್ಲಿ ನಿಮ್ಮ ಪ್ರತಿವಾದವೇನೂ ಇಲ್ಲವೆಂದು ಭಾವಿಸಿ, ಕ.ನಾ.ಸೇ (ವ.ನಿ & ಮೇ) ನಿಯಮ 1957 ರ ನಿಯಮ 11 ನೇ ಮೇರೆಗೆ ಅವರ ಮೇಲೆ ಏಕಪಕ್ಷೀಯವಾಗಿ ಮುಂದಿನ ಕ್ರಮ ತೆಗೆದುಕೊಳ್ಳಲಾಗುವುದು ಎಂದು ತಿಳಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (3) ರ ದಿನಾಂಕ : 8–10–2010 ರ ಲಿಖಿತ ಹೇಳಿಕೆಯಲ್ಲಿ, ಶ್ರೀ ಎಂ. ಪಿ. ಮಾರುತಿ, ತಹಶೀಲ್ದಾರ್ ರವರು ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆ 1993 ರ ಅಡಿಯಲ್ಲಿ ಚುನಾವಣೆ ನಿಯಮ ಚುನಾವಣೆಗೆ ಸಂಬಂಧಿಸಿದಂತೆ, ಚುನಾವಣಾಧಿಕಾರಿಗಳು ಚುನಾವಣೆ ನಡೆಸುವಲ್ಲಿ ಎಲ್ಲಾ ಜವಾಬ್ದಾರಿಗಳನ್ನು ಹೊತ್ತುವರಾಗಿದ್ದು, ಅವರ ಅಂತಿಮ ನಿರ್ಧಾರಗಳು ಕಾಯ್ದೆ ಅಡಿಯಲ್ಲಿ ಕ್ರಮಬದ್ಧ, ಈ ಮಧ್ಯೆದಲ್ಲಿ ಈ ಶಾಸನಬದ್ಧ ವ್ಯವಹರಣೆಯಲ್ಲಿ ಯಾವ ಹಂತದಲ್ಲಿಯೂ ಪಂಚಾಯಿತಿ ವ್ಯಾಪ್ತಿಯಲ್ಲಿನ ತಹಶೀಲ್ದಾರನು ಯಾವ ನಿಟ್ಟಿನಲ್ಲಿಯೂ ಕೈಹಾಕತಕ್ಕದ್ದಲ್ಲ, ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆ 1993 ಕಲಂ 31 ರಲ್ಲಿ ಚುನಾವಣಾಧಿಕಾರಿಯು ಶಾಸನಬದ್ಧವಾಗಿ ಕೆಲಸ ನಿರ್ವಹಿಸುವಾಗ ತಹಶೀಲ್ದಾರನು ಆತನ ವ್ಯವದಾನದಲ್ಲಿ ಕೈಹಾಕಲು ಅಥವಾ ಆತನಿಗೆ ಸೂಚನೆಗಳನ್ನು ನೀಡಲು ಅಥವಾ ಬೇರೆ ಯಾವುದೋ ರೀತಿಯ ನಿರ್ದೇಶನಗಳನ್ನು ನೀಡಲು ಅವಕಾಶ ಇರುವುದಿಲ್ಲ. ವಾಸ್ತವವಾಗಿ ಚುನಾವಣೆಗೆ ಮುನ್ನ ಕಾಯ್ದೆ ಅಡಿಯಲ್ಲಿ ಇಂತಹ ಶಾಸನಬದ್ಧ ಅಧಿಕಾರಿಯು ಏನೇನು ಜವಾಬ್ದಾರಿಯನ್ನು ನಿರ್ವಹಿಸಬೇಕಾಗುತ್ತದೆ ಹಾಗೂ ಏನೇನು ಕಾಯ್ದೆ ರೀತ್ಯ ನಿರ್ಧಾರಗಳನ್ನು ಕೈಗೊಳ್ಳಬೇಕಾಗುತ್ತದೆ ಎಂಬುದರ ಬಗ್ಗೆ ತರಬೇತಿ ನಡೆಸಿ ಅಂತಹವರಿಗೆ ತಿಳುವಳಿಕೆ ನೀಡುವುದು ಸಾಮಾನ್ಯ. ಇದೂ ಕೂಡ ಕಾಯ್ದೆಯಲ್ಲಿ ಎಲ್ಲೂ ಕಡ್ಡಾಯವಾಗಿ ತಹಶೀಲ್ದಾರನು ಕೈಗೊಳ್ಳತಕ್ಕದ್ದೆಂದು ವಿಧಿಸಲ್ಪಟ್ಟಿಲ್ಲ ಎಂದು ಆರೋಪಗಳನ್ನು ನಿರಾಕರಿಸಿರುತ್ತಾರೆ.

ಆರೋಪಿತ ಸರ್ಕಾರಕ್ಕೆ ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಲಾಗಿ, ಚುನಾವಣಾ ಆಯೋಗದಿಂದ ಹೊರಡಿಸಿರುವ ಸುತ್ತೋಲೆ/ಸೂಚನೆಗಳ ಪತ್ರಗಳಲ್ಲಿ ತಿಳಿಸಿರುವಂತೆ, ಮತಪತ್ರ ಮುದ್ರಿಸುವ ಮೊದಲು ಸಂಬಂಧಿಸಿದ ಸಹಾಯಕ ಚುನಾವಣಾಧಿಕಾರಿ/ಚುನಾವಣಾಧಿಕಾರಿ ಹಾಗೂ ತಹಶೀಲ್ದಾರರು ಫ್ರೂಫ್‌ನ್ನು (proof) ಪರಿಶೀಲಿಸಿ, ತಾಳೆ ನೋಡಿ, ತಪ್ಪುಗಳಾಗದಂತೆ ಎಚ್ಚರಿಕೆ ವಹಿಸಿ, ನಂತರ ಮುದ್ರಣಕ್ಕೆ ಕಳುಹಿಸಲು ಸೂಚಿಸಿರುತ್ತಾರೆ. ಹಾಗೂ ಉಪ ವಿಭಾಗಾಧಿಕಾರಿಗಳು ಮುದ್ರಣದ ನಂತರ ಸದರಿ ಪತ್ರವನ್ನು ಪರಿಶೀಲಿಸಿ ಚುನಾವಣಾ ಆಯೋಗಕ್ಕೆ ಕಳುಹಿಸಲು ಸೂಚಿಸಿರುತ್ತಾರೆ. ಇದರ ಪ್ರಕಾರ ಇಲ್ಲರಿಗೂ ಸಾಮೂಹಿಕ ಜವಾಬ್ದಾರಿ ಇರುತ್ತದೆ. ತಹಶೀಲ್ದಾರ್ ಒಬ್ಬರಿಗೆ ನೇರ ಜವಾಬ್ದಾರಿ ಇರುವುದಿಲ್ಲ. ಆದುದರಿಂದ ಇದು ನೇರವಾಗಿ ಚುನಾವಣಾಧಿಕಾರಿಯವರ ಕರ್ತವ್ಯವಾಗಿರುತ್ತದೆ. ತಹಶೀಲ್ದಾರರೇನಿದ್ದರೂ ಉಸ್ತುವಾರಿ ಜವಾಬ್ದಾರಿಯವರಾಗಿರುತ್ತಾರೆ. ಇದೇ ವಿಷಯಕ್ಕೆ ಸಂಬಂಧಿಸಿದಂತೆ, ಸಂಬಂಧಪಟ್ಟ ಚುನಾವಣಾಧಿಕಾರಿ ದಿನಾಂಕ : 14–5–2010 ರಂದು ತಹಶೀಲ್ದಾರರ ಮುಖಾಂತರ ಜಿಲ್ಲಾಧಿಕಾರಿಗಳಿಗೆ ಸಲ್ಲಿಸಿರುವ ಮನವಿಯಲ್ಲಿ, ಮೀಸಲಾತಿ ವಿಷಯದಲ್ಲಿ ಗೊಂದಲ ಉಂಟಾಗಿ ಪ್ರಪತ್ರ–10 ಸಿದ್ಧಪಡಿಸುವ ಸಂದರ್ಭದಲ್ಲಿ ಅಚಾತುರ್ಯದಿಂದ ಅವಿರೋಧ ಆಯ್ಕೆ ಎಂದು ಪ್ರಕಟಿಸಿರುತ್ತೇನೆ ಎಂದು ತಪ್ಪೊಪ್ಪಿಕೊಂಡಿರುತ್ತಾರೆ. ಆರೋಗ್ಯ ಸರಿ ಇಲ್ಲದೇ ಇದ್ದುದರಿಂದ ಅಚಾತುರ್ಯದಿಂದ ತಪ್ಪಾಗಿರುವುದಾಗಿ ನಿವೇದಿಸಿದ್ದಾರೆ. ಅಲ್ಲದೆ, ತಹಶೀಲ್ದಾರರು ಕಾಲಕಾಲಕ್ಕೆ ಸರಿಯಾಗಿ ತರಬೇತಿ ಹಾಗೂ ಸಾಕಷ್ಟು ಮಾಹಿತಿ, ಅಗತ್ಯ ಪುಸ್ತಕಗಳು, ಕೈಪಿಡಿಗಳನ್ನು, ಕಾಲಕಾಲಕ್ಕೆ ಚುನಾವಣಾ ಆಯೋಗದಿಂದ ಬಂದ ನಿರ್ದೇಶನಗಳು, ಸುತ್ತೋಲೆಗಳನ್ನು ತಿಳಿಯಪಡಿಸಿದ್ದಾರೆ. ಇದು ತಮ್ಮಿಂದಾಗಿರುವ ತಪ್ಪು, ಆದುದರಿಂದ, ಆರೋಪಮುಕ್ತಗೊಳಿಸಬೇಕೆಂದು ಸಂಬಂಧಿಸಿದ ಚುನಾವಣಾಧಿಕಾರಿಯ ಸ್ವಹಸ್ತಾಕ್ಷರದಲ್ಲಿ ತಹಸೀಲ್ದಾರರ ನೋಟೀಸಿಗೆ ಉತ್ತರವನ್ನು ತಹಶೀಲ್ದಾರರ ಮುಖಾಂತರ ಜಿಲ್ಲಾಧಿಕಾರಿಗಳಿಗೆ ಸಲ್ಲಿಸಿರುತ್ತಾರೆ. ಈ ವಿಷಯದಲ್ಲಿ ತಹಶೀಲ್ದಾರರು ಜವಾಬ್ದಾರಿಯಿಂದ ಕೆಲಸ ನಿರ್ವಹಿಸಿದ್ದರೂ ಚುನಾವಣಾಧಿಕಾರಿಯ ತಪ್ಪಿನಿಂದ ಇದೊಂದು ತಪ್ಪಾಗಿರುತ್ತದೆ. ಅಲ್ಲದೇ ತಹಶೀಲ್ದಾರರು ಇಂತಹದೇ ಇನ್ನೆರಡು ಕ್ಷೇತ್ರಗಳಾದ ಪಿ.ಡಿ. ಕೋಟೆ ಮತ್ತು ಬಬ್ಬೂರು ಪಂಚಾಯಿತಿಗಳಲ್ಲಿನ ಪ್ರಕರಣಗಳಲ್ಲಿ ತಿಳುವಳಿಕೆ ಕೊಟ್ಟಿದ್ದಾರೆಂದು ಒಪ್ಪಿಕೊಂಡಿದ್ದಾರೆ. ಪ್ರಪತ್ರ–10 ರಲ್ಲಿ ಸಂಬಂಧಪಟ್ಟ ಚುನಾವಣಾಧಿಕಾರಿ ದಿನಾಂಕ : 29–4–2010 ರಂದು ಸ್ವತಃ ಬರೆದು, ಮೊಹರಿನೊಂದಿಗೆ ಸಹಿ ಮಾಡಿದ್ದಾರೆಯೇ ಹೊರತು ತಹಶೀಲ್ದಾರರು ಬರೆದು ಸಹಿ ಮಾಡಿರುವುದಿಲ್ಲ. ಜಿಲ್ಲಾಧಿಕಾರಿಗಳು ಆರೋಪ–1 ರಲ್ಲಿ ತಿಳಿಸಿರುವಂತೆ ತಹಶೀಲ್ದಾರರು ಎಲ್ಲೂ ಬರೆದು ಸಹಿ ಮಾಡಿರುವುದಿಲ್ಲ. ಇದು ಸಂಬಂಧಪಟ್ಟ ಚುನಾವಣಾಧಿಕಾರಿಯು ಬರೆದು ಸಹಿ ಮಾಡಿರುವುದು ಕಂಡು ಬುತ್ತದೆ. ಆದ್ದರಿಂದ, ಶ್ರೀ ಎಂ. ಪಿ. ಮಾರುತಿ, ತಹಶೀಲ್ದಾರ್ ರವರ ವಿರುದ್ಧದ ಶಿಸ್ತು ಕ್ರಮ ಕೈಗೊಳ್ಳುವ ವಿಚಾರಣೆಯನ್ನು ಕೈಬಿಟ್ಟು ಪ್ರಕರಣವನ್ನು ಮುಕ್ತಾಯ ಮಾಡಲು ಹಾಗೂ ಸದರಿಯವರಿಗೆ ಇನ್ನು ಮುಂದೆ ಇಂತಹ ಪ್ರಕರಣ ಮರುಕಳಿಸದಂತೆ ಎಚ್ಚರಿಕೆ ನೀಡಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 47 ಎಡಿಇ 2010, ಬೆಂಗಳೂರು, ದಿನಾಂಕ : 17–02–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಎಂ. ಪಿ. ಮಾರುತಿ, ತಹಶೀಲ್ದಾರ್, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವುದನ್ನು ಕೈಬಿಟ್ಟು, ಪ್ರಕರಣವನ್ನು ಮುಕ್ತಾಯಗೊಳಿಸಿ ಆದೇಶಿದೆ ಹಾಗೂ ಸದರಿ ಅಧಿಕಾರಿಯವರಿಗೆ ಇನ್ನು ಮುಂದೆ ಇಂತಹ ಪ್ರಕರಣ ಮರುಕಳಿಸದಂತೆ ನೋಡಿಕೊಳ್ಳಲು ಎಚ್ಚರಿಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 548

**ಎಸ್. ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ, (ಸೇವೆಗಳು–3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ಸಿಆಸುಇ 042 ಕೆಇವಿ 10, ಬೆಂಗಳೂರು ದಿನಾಂಕ: 14–01–2011**

ದಿನಾಂಕ : 27–12–2010ರ ಆದೇಶ ಸಂಖ್ಯೆ : ಸಿಆಸುಇ 042 ಕೆಇವಿ 10ರ ಪುಟ ಸಂಖ್ಯೆ 2 ರಲ್ಲಿನ ಕ್ರಮ ಸಂಖ್ಯೆ : 17ರಲ್ಲಿನ ನಾಲ್ಕನೇ ಸಾಲಿನ ಕ್ರಮ ಸಂಖ್ಯೆ (8)ರ ನಂತರ ಇರುವ ಶ್ರೀ ಬಿನ್ ಕೃಷ್ಣಮೂರ್ತಿ, ಎಂಬುದರ ಬದಲಿಗೆ ಶ್ರೀ ಬಿ.ಎನ್. ಕೃಷ್ಣಮೂರ್ತಿ ಎಂಬುದಾಗಿ ಓದಿಕೊಳ್ಳುವುದು.

2. ಅದೇ ಆದೇಶದ ಪುಟ ಸಂಖ್ಯೆ 3 ರಲ್ಲಿನ ಕಂಡಿಕೆಯ ಕ್ರಮ ಸಂಖ್ಯೆ 4 ರಲ್ಲಿನ 13 ನೇ ಸಾಲಿನ ವಾಕ್ಯದಲ್ಲಿ ನಮೂದಾಗಿರುವ ದಿನಾಂಕ : 15–06–10ರ ಬದಲಿಗೆ ದಿನಾಂಕ : 15–09–10 ಎಂಬುದಾಗಿ ಮತ್ತು 14ನೇ ಸಾಲಿನ ವಾಕ್ಯದಲ್ಲಿ ನಮೂದಾಗಿರುವ ದಿನಾಂಕ : 16–06–10ರ ಬದಲಿಗೆ ದಿನಾಂಕ : 16–09–10 ಎಂಬುದಾಗಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ ಎಂ.ಟಿ. ರೇಜು**

ಸರ್ಕಾರದ ಉಪ ಕಾರ್ಯದರ್ಶಿ,

ಪಿ. ಆರ್. 271 ಸಿಆಸುಇ (ಸೇವೆಗಳು–2)

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆಯಲ್ಲಿ ರಾಜ್ಯ ಹೆದ್ದಾರಿ–132ನ್ನು ಅಭಿವೃದ್ಧಿ ಪಡಿಸಲು (ಬಳ್ಳಾರಿ ನಗರದಿಂದ ಆಂಧ್ರ ಪ್ರದೇಶದ ಗಡಿಯವರೆಗೆ) ಭೂಸ್ವಾಧೀನಕ್ಕಾಗಿ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ :**
1. ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ ವಿಭಾಗ, ಬಳ್ಳಾರಿ, ಇವರ ಪತ್ರ ಸಂಖ್ಯೆ : ಕಾನಿಇ/ಲೋಇ/ತಾಶಾ/ಪಿಬಿ–1/ಎಫ್–70/2010–11/3184 ದಿನಾಂಕ ; 3–12–2010
2. ಸಹಾಯಕ ಆಯುಕ್ತರು, ಬಳ್ಳಾರಿ ಇವರ ಪತ್ರ ಸಂಖ್ಯೆ : ಕಂ.ಭೂ.ಸ್ವಾ. 185.2010–11 ದಿನಾಂಕ : 01–12–2010

**ಪ್ರಸ್ತಾವನೆ :**

ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ ಕಾರ್ಯನಿರ್ವಾಹಕ ಅಭಿಯಂತರರು, ಬಳ್ಳಾರಿ ತಾಲ್ಲೂಕಿನಲ್ಲಿ ರಾಜ್ಯ ಹೆದ್ದಾರಿ–132ರ ಸುಧಾರಣೆಗಾಗಿ ಅವಶ್ಯವಿರುವ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಲು ಸಂಬಂಧಿಸಿದ ಸಮಗ್ರ ಪ್ರಸ್ತಾವನೆಯನ್ನು ಮೆ. ಸ್ಕಾಟ್ ವಿಲನ್ಸ್ ಕಿರ್ಕಾ ಪ್ಯಾಟ್ರಿಕ್ ಅಂಡ್ ಕಂಪನಿ ಲಿಮಿಟೆಡ್, ಬೆಂಗಳೂರು ಇವರು ಸಹಾಯಕ ಆಯುಕ್ತರು ಇವರಿಗೆ ಸಲ್ಲಿಸಿರುತ್ತಾರೆ ಎಂದು ತಿಳಿಸಿ, ಈ ಪ್ರಸ್ತಾವನೆಯಂತೆ, ಏಳು ಗ್ರಾಮಗಳ ಭೂಸ್ವಾಧೀನಕ್ಕಾಗಿ ಒಟ್ಟು ರೂ. 1,17,00,408/–ಗಳ ಅವಶ್ಯಕತೆ ಇರುತ್ತದೆಂದು ಈ ಗ್ರಾಮಗಳ ಭೂಸ್ವಾಧೀನಕ್ಕೆ ಅವಶ್ಯವಿರುವ ರೂ. 1,17,00,408/–ಗಳ ಮೊತ್ತವನ್ನು ಸಹಾಯಕ ಆಯುಕ್ತರು ಬಳ್ಳಾರಿ ಇವರಿಗೆ ಸಂದಾಯ ಮಾಡಲು ಕೋರಿದ್ದಾರೆ.

ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ರಾಜ್ಯ ಹೆದ್ದಾರಿ ಸಂಖ್ಯೆ : 132 (ಬಳ್ಳಾರಿ–ಮೋಕ) ರಸ್ತೆಗೆ ಅಗತ್ಯ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಲು ಪಿ.ಸಿ.ಸಿ. ಮೂಲಕ ಸಿದ್ಧಪಡಿಸಲಾದ ಭೂಸ್ವಾಧೀನಕ್ಕೆ ಸಂಬಂಧಿಸಿದ ಪ್ರಸ್ತಾವನೆಯಂತೆ ಏಳು ಗ್ರಾಮಗಳ ಭೂಸ್ವಾಧೀನಕ್ಕಾಗಿ ರೂ. 1,17,00,408/–ಗಳನ್ನು ಬಿಡುಗಡೆ ಮಾಡಲು ಸಹಾಯಕ ಆಯುಕ್ತರು, ಬಳ್ಳಾರಿ ಇವರು ಕೋರಿದ್ದಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 01 ರಾರಾವಿ 2011, ಬೆಂಗಳೂರು, ದಿನಾಂಕ : 17ನೇ ಜನವರಿ, 2011**

ಬಳ್ಳಾರಿ ಜಿಲ್ಲೆಯಲ್ಲಿ ರಾಜ್ಯ ಹೆದ್ದಾರಿ ಸಂಖ್ಯೆ – 132 (ಬಳ್ಳಾರಿ–ಮೋಕ) ರಸ್ತೆಗೆ ಅವಶ್ಯವಿರುವ ಜಮೀನಿನ ಭೂಸ್ವಾಧೀನಕ್ಕಾಗಿ ಒಟ್ಟು ರೂ. 1,17,00,408/– (ಒಂದು ಕೋಟಿ ಹದಿನೇಳು ಲಕ್ಷ ನಾಲ್ಕು ನೂರ ಎಂಟು ರೂಪಾಯಿಗಳು ಮಾತ್ರ) ಜಿಲ್ಲಾಧಿಕಾರಿ, ಬಳ್ಳಾರಿ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2. ಈ ಮೊತ್ತವನ್ನು 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 5465–01–190–2–05 ಬದಲಿ ರಸ್ತೆಗಳು – ಬಂಡವಾಳ ಹೂಡಿಕೆ (ಯೋಜನೆ)ಯಡಿ ಒದಗಿಸಿರುವ ರೂ. 1,500.00 ಲಕ್ಷಗಳ ಅನುದಾನದಲ್ಲಿ ಭರಿಸುವುದು.

3. ಈ ಆದೇಶವನ್ನು ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು ಇವರಿಗೆ ಸರ್ಕಾರದ ಆದೇಶ ಸಂಖ್ಯೆ : ಎಫ್.ಡಿ. 1 ಟಿಎಫ್‌ಪಿ 2008 ದಿನಾಂಕ : 16–05–2008ರನ್ವಯ ಪ್ರದತ್ತವಾಗಿರುವ ಆರ್ಥಿಕ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಎ. ಬಾಬುರವೀಂದ್ರನಾಥ್ ಪಟೇಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ. ಆರ್. 272 ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

ವಿಷಯ : ಮೈಸೂರು ಸಕ್ಕರೆ ಕಾರ್ಖಾನೆ (ನಿ) ಇದರ ಪುನಃಶ್ಚೇತನಕ್ಕೆ ಸರ್ಕಾರದಿಂದ ಆರ್ಥಿಕ ನೆರವು – 2010–11ನೇ ಸಾಲಿನಲ್ಲಿ ಹೆಚ್ಚುವರಿ ಅನುದಾನ ಒದಗಿಸಿ ಹಣ ಬಿಡುಗಡೆ ಬಗ್ಗೆ.

ಓದಲಾಗಿದೆ :
1) ಸರ್ಕಾರದ ಆದೇಶ ಸಂಖ್ಯೆ : ಸಿಐ 184 ಎಸ್‌ಜಿಎಫ್ 2007 ದಿನಾಂಕ : 23–07–2010
2) ಸರ್ಕಾರದ ಆದೇಶ ಸಂಖ್ಯೆ : ಸಿಐ 49 ಎಸ್‌ಜಿಎಫ್ 2010 ದಿನಾಂಕ : 19–08–2010
3) ಸರ್ಕಾರದ ಆದೇಶ ಸಂಖ್ಯೆ : ಸಿಐ 49 ಎಸ್‌ಜಿಎಫ್ 2010 ದಿನಾಂಕ : 25–08–2010
4) ಸರ್ಕಾರದ ಆದೇಶ ಸಂಖ್ಯೆ : ಸಿಐ 184 ಎಸ್‌ಜಿಎಫ್ 07 (3) ದಿನಾಂಕ : 18–12–2010

5) ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರ ಸಂಖ್ಯೆ : ಎಂಎಸ್‌ಕೋ/ಎಂಡಿ/2010/130 ದಿನಾಂಕ : 18-12-2010

6) ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 216 ಬಿಆರ್‌ಎಸ್ 2010, ದಿನಾಂಕ : 11-01-2011

**ಪ್ರಸ್ತಾವನೆ :**

ಮೇಲೆ ಓದಲಾದ (1), (2), (3) ಮತ್ತು (4)ರಲ್ಲಿರುವ ಸರ್ಕಾರದ ಆದೇಶಗಳಲ್ಲಿ ಮೈಸೂರು ಸಕ್ಕರೆ ಕಾರ್ಖಾನೆಯ ಪುನಃಶ್ಚೇತನ ಸಂಬಂಧ, ಹುಡ್ಕೋ ಸಾಲದ ಮರುಪಾವತಿಗಾಗಿ ಮತ್ತು ದುಡಿಯುವ ಬಂಡವಾಳಕ್ಕಾಗಿ ಕ್ರಮವಾಗಿ ರೂ. 902.22 ಲಕ್ಷ ರೂ. 500.00 ಲಕ್ಷ, ರೂ. 1000.00 ಲಕ್ಷ ಮತ್ತು ರೂ. 554.55 ಲಕ್ಷಗಳು ಸೇರಿ ಒಟ್ಟು ರೂ. 2956.77 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (5) ರಲ್ಲಿರುವ ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರದಲ್ಲಿ ಕಾರ್ಖಾನೆಯನ್ನು ಪುನಃಶ್ಚೇತನಗೊಳಿಸುವ ಸಂಬಂಧ ಮಿಲ್ ಆಧುನೀಕರಣಕ್ಕಾಗಿ ರೂ. 49.10 ಕೋಟಿಗಳಿಗೆ ಗುತ್ತಿಗೆದಾರರೊಂದಿಗೆ ಒಪ್ಪಂದ ಮಾಡಿಕೊಂಡಿದ್ದು, ಮಾರ್ಚ್ 2011ರ ಅಂತ್ಯಕ್ಕೆ ರೂ. 4259.00 ಲಕ್ಷಗಳು ಬೇಕಾಗಿದೆ ಎಂದು ಈಗಾಗಲೇ ನೀಡಿರುವ ರೂ. 851.80 ಲಕ್ಷಗಳನ್ನು ಹೊಂದಾಣಿಕೆ ಮಾಡಿಕೊಂಡಲ್ಲಿ ಮಾರ್ಚ್ 2011ರ ಅಂತ್ಯಕ್ಕೆ ರೂ. 3407.20 ಲಕ್ಷಗಳ ಅಗತ್ಯವಿದೆ ಎಂದು ತಿಳಿಸಿ ತಕ್ಷಣದ ಅಗತ್ಯಕ್ಕಾಗಿ ರೂ. 10.00 ಕೋಟಿಗಳನ್ನು ಬಂಡವಾಳ ಹೂಡಿಕೆಗಾಗಿ ಮತ್ತು ರೂ. 10.00 ಕೋಟಿಗಳನ್ನು ಕಬ್ಬು ಸರಬರಾಜು ಮಾಡಿದ ರೈತರಿಗೆ ಪಾವತಿಸಲು ದುಡಿಯುವ ಬಂಡವಾಳವಾಗಿ ಒಟ್ಟು ರೂ. 20.00 ಕೋಟಿಗಳನ್ನು ತಕ್ಷಣ ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿದ್ದಾರೆ.

ವ್ಯವಸ್ಥಾಪಕ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ 2010-11ನೇ ಸಾಲಿನ ಅನುದಾನದಲ್ಲಿ ಒದಗಿಸಲಾಗಿರುವ ರೂ. 20.00 ಕೋಟಿಗಳು ಮೇಲೆ ಓದಲಾದ (1), (2), (3) ಮತ್ತು (4) ರ ಆದೇಶಗಳಲ್ಲಿ ಈಗಾಗಲೇ ಬಿಡುಗಡೆಯಾಗಿರುವುದರಿಂದ ಹೆಚ್ಚುವರಿ ಅನುದಾನ ರೂ. 10.00 ಕೋಟಿಗಳನ್ನು ಒದಗಿಸಿ ಕಾರ್ಖಾನೆಗೆ ಬಂಡವಾಳ ಹೂಡಿಕೆಗಾಗಿ ಬಿಡುಗಡೆಗೊಳಿಸಲು ಮೇಲೆ ಓದಲಾದ (6) ರಲ್ಲಿರುವ ಸರ್ಕಾರದ ಆದೇಶದಲ್ಲಿ ಸಹಮತಿಯಾಗಿದ್ದು, ಅದರಂತೆ ಹಣ ಬಿಡುಗಡೆಗೆ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಐ 49 ಎಸ್‌ಜಿಎಫ್ 2010, (3), ಬೆಂಗಳೂರು, ದಿನಾಂಕ : 18ನೇ ಜನವರಿ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ ಈ ಕಾರ್ಖಾನೆಗೆ 2010-11ನೇ ಸಾಲಿಗೆ ಕಾರ್ಖಾನೆಯ ಪುನಃಶ್ಚೇತನ ಸಂಬಂಧ ಬಂಡವಾಳ ಹೂಡಿಕೆಗಾಗಿ ರೂ. 10.00 ಕೋಟಿ ರೂಗಳನ್ನು (ಹತ್ತು ಕೋಟಿ ರೂ.ಗಳು ಮಾತ್ರ) ಹೆಚ್ಚುವರಿ ಅನುದಾನವಾಗಿ ಒದಗಿಸಿ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2010-11ನೇ ಸಾಲಿನಲ್ಲಿ ಕಾರ್ಖಾನೆಯ ಪುನಃಶ್ಚೇತನ ಸಂಬಂಧ ಲೆಕ್ಕ ಶೀರ್ಷಿಕೆ "4860-04-190-1-00-211 ಹೂಡಿಕೆ (ಯೋಜನೆ)" ಅಡಿಯಲ್ಲಿ ಬಂಡವಾಳ ಹೂಡಿಕೆಗಾಗಿ ರೂ. 10.00 ಕೋಟಿಗಳನ್ನು ಹೆಚ್ಚುವರಿಯಾಗಿ ಒದಗಿಸಿ ಬಿಡುಗಡೆಗೆ ಮಂಜೂರು ಮಾಡಲಾಗಿದೆ.

ಹಣ ಸೆಳೆಯುವ ಅಧಿಕಾರಿಯು ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ, ಆಗಿದ್ದು ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 216 ಬಿಆರ್‌ಎಸ್ 2010 ದಿನಾಂಕ : 11-01-2011 ರಲ್ಲಿ ಮತ್ತು ಟಿಪ್ಪಣಿ ಸಂಖ್ಯೆ : ಎಫ್‌ಡಿ 2156 ವೆಚ್ಚ-1/2010 ದಿನಾಂಕ ; 12-01-2011 ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ)

ಪಿ. ಆರ್. 273 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ** : ಮಹಿಳಾ ಸಮಾಜ ಕಸ್ತೂರಿ ಬಾ ಶಿಶುವಿಹಾರ (ರಿ), ದೊಡ್ಡಬಳ್ಳಾಪುರ ಸಂಘಕ್ಕೆ ಆಡಳಿತಗಾರರನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ** : 1) ಸಹಕಾರ ಸಂಘಗಳ ನಿಬಂಧಕರು ಬೆಂಗಳೂರು ರವರ ಪತ್ರ ಸಂಖ್ಯೆ : ಅರ್‌ಸಿಎಸ್/ಎಡಿಎಂ/ 95/ಎಸ್‌ಓಆರ್/2010-11, ದಿ : 29-10-2010

2) ಕಾರಣ ಕೇಳುವ ನೋಟೀಸ್ ಸಇ 156 ಸಸನೋ 2010 ದಿನಾಂಕ : 15-12-2010

3) ನೂತನ ಅಧ್ಯಕ್ಷರು ಮತ್ತು ಕಾರ್ಯದರ್ಶಿ, ಮಹಿಳಾ ಸಮಾಜ ಕಸ್ತೂರ ಬಾ ಶಿಶುವಿಹಾರ, ದೊಡ್ಡಬಳ್ಳಾಪುರ ರವರ ಲಿಖಿತ ಹೇಳಿಕೆ ದಿನಾಂಕ : 27-12-2010 ಮತ್ತು 28-12- 2010

4) ಸಂಘದ ಅಧ್ಯಕ್ಷರು ಮತ್ತು ಕಾರ್ಯದರ್ಶಿ ಮಹಿಳಾ ಸಮಾಜ ಕಸ್ತೂರ ಬಾ ಶಿಶುವಿಹಾರ, ದೊಡ್ಡಬಳ್ಳಾಪುರರವರ ಲಿಖಿತ ಹೇಳಿಕೆ ದಿನಾಂಕ : 28-12-2010

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ : 29-10-2010ರ ಪತ್ರದಲ್ಲಿ ಮಹಿಳಾ ಸಮಾಜ ಕಸ್ತೂರಿ ಬಾ ಶಿಶುವಿಹಾರ (ರಿ), ದೊಡ್ಡಬಳ್ಳಾಪುರ (ಸಂಕ್ಷಿಪ್ತವಾಗಿ ಸಮಾಜ) ಆಡಳಿತ ಸಮಿತಿಗೆ ನಿಯಮಾನುಸಾರ ಚುನಾವಣೆ ನಡೆಸಲು ವಿಫಲವಾಗಿರುವುದು, ಸಂಘಗಳ ಜಿಲ್ಲಾ ನೋಂದಣಾಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರು ನಡೆಸಿರುವ ವಿಚಾರಣೆಯಿಂದ ದೃಢಪಟ್ಟಿರುವುದರಿಂದ, ಮೇಲ್ಕಂಡ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ 1960ರ ಪ್ರಕರಣ 27(ಎ)ರ ಅವಕಾಶದನ್ವಯ ಆಡಳಿತಗಾರರನ್ನು ನೇಮಿಸುವ ಬಗ್ಗೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸಂಘದಲ್ಲಿನ ಈ ನ್ಯೂನತೆ ಬಗ್ಗೆ ಲಿಖಿತ/ಮೌಖಿಕ ಹೇಳಿಕೆಯನ್ನು ನೀಡುವಂತೆ ಮೇಲೆ ಓದಲಾದ (2) ರಲ್ಲಿ ಕಾಣಿಸಿರುವಂತೆ ಸಂಘದ

ಅಧ್ಯಕ್ಷರು/ಕಾರ್ಯದರ್ಶಿಯವರಿಗೆ ಕಾರಣ ಕೇಳುವ ನೋಟಿಸ್ಸನ್ನು ನೀಡಿ ಸಂಘಕ್ಕೆ ಆಡಳಿತಗಾರರನ್ನು ಏಕೆ ನೇಮಕ ಮಾಡಬಾರದು ಎಂಬ ಬಗ್ಗೆ ಲಿಖಿತ/ಮೌಖಿಕ ಹೇಳಿಕೆಯನ್ನು ನೋಟಿಸ್ ತಲುಪಿದ 15 ದಿವಸಗಳ ಒಳಗೆ ಸಲ್ಲಿಸುವಂತೆ ತಿಳಿಸಲಾಗಿತ್ತು.

ಸರ್ಕಾರದಿಂದ ನೀಡಲಾದ ಕಾರಣ ಕೇಳುವ ನೋಟಿಸ್‌ಗೆ ಮೇಲೆ ಓದಲಾದ (3) ಮತ್ತು (4)ರ ಪತ್ರಗಳಲ್ಲಿ ಸಂಘದ ಕಾರ್ಯಕಾರಿ ಸಮಿತಿಯ ಅಧ್ಯಕ್ಷರು ಮತ್ತು ಕಾರ್ಯದರ್ಶಿಯವರು ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಸಂಘದ ಅಧ್ಯಕ್ಷರು ಮತ್ತು ಕಾರ್ಯದರ್ಶಿಯವರು ಸಹಿ ಮಾಡಿರುವ ದಿ : 27-12-2010ರಲ್ಲಿ ಲಿಖಿತ ಹೇಳಿಕೆಯನ್ನು ನೀಡಿರುತ್ತಾರೆ. ಅಲ್ಲದೆ ಮೇಲೆ ಓದಲಾದ (4)ರ ಪತ್ರದಲ್ಲಿ ಸಂಘದ ಅಧ್ಯಕ್ಷರು/ ಉಪಾಧ್ಯಕ್ಷರು/ಕಾರ್ಯದರ್ಶಿ/ಖಜಾಂಚಿ ಮತ್ತು ಇಬ್ಬರು ನಿರ್ದೇಶಕರು ಸೇರಿದಂತೆ 6 ಜನರು ಸಹಿ ಮಾಡಿರುವ ಲಿಖಿತ ಹೇಳಿಕೆಯನ್ನು ನೀಡಿ, ಸಂಸ್ಥೆಯಲ್ಲಿ ಹಾಲಿ ಕಾರ್ಯಕಾರಿ ಸಮಿತಿ ನೇಮಿಸುವ ವಿಚಾರದಲ್ಲಿ ಗೊಂದಲಗಳಿದ್ದು, ಸದರಿ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಿಸುವ ಕುರಿತು ಅವರ ತಂಟೆ ತಕರಾರು ಯಾವುದೂ ಇರುವುದಿಲ್ಲ ಸಂಘದ ಬೈಲಾ ನಿಯಮಾನುಸಾರ ಚುನಾವಣೆ ನಡೆಸುವವರೆಗೂ ಆಡಳಿತಾಧಿಕಾರಿಯನ್ನು ನೇಮಿಸಲು ಕೋರಿದ್ದಾರೆ.

ಸಂಘದ ಅಧ್ಯಕ್ಷರು ಮತ್ತು ಕಾರ್ಯದರ್ಶಿಯವರು ನೀಡಿರುವ ದಿನಾಂಕ : 27-12-2010 ಮತ್ತು 28-12-2010ರ ಲಿಖಿತ ಹೇಳಿಕೆಯನ್ನು ಗಮನಿಸಿದಾಗ ಅದರಲ್ಲಿ ಸಂಘದ ಕಾರ್ಯನಿರ್ವಹಣೆಯಲ್ಲಿನ ನ್ಯೂನತೆ ಬಗ್ಗೆ ಹಲವಾರು ಅಂಶಗಳನ್ನು ಪ್ರಸ್ತಾಪಿಸಲಾಗಿದೆ. ದಿನಾಂಕ : 24-10-2010 ರಂದು ಸಮಾಜದ ಸರ್ವ ಸದಸ್ಯರ ಸಭೆಯಲ್ಲಿ 123 ಸದಸ್ಯರು ಹಾಜರಿದ್ದು, ಸರ್ವಾನುಮತದಿಂದ ಕೈ ಎತ್ತುವ ಮೂಲಕ 9 ಸದಸ್ಯರನ್ನು ನಿರ್ದೇಶಕರನ್ನಾಗಿ ಆಯ್ಕೆ ಮಾಡಲಾಗಿದೆ. ಸಮಾಜದ ನೂತನ ಪದಾಧಿಕಾರಿಗಳ ಆಯ್ಕೆಯು ಸಮಾಜದ ಬೈಲಾಗೆ ಅನುಗುಣವಾಗಿದ್ದು ಯಾವುದೇ ಕಾಯಿದೆಯನ್ನು ಉಲ್ಲಂಘನೆ ಮಾಡಿಲ್ಲವೆಂದು ಹಾಗೂ ಸಮಾಜಕ್ಕೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಅವಶ್ಯಕತೆ ಇರುವುದಿಲ್ಲವೆಂದು ಹೇಳಿಕೆ ನೀಡಿರುತ್ತಾರೆ.

ಮಹಿಳಾ ಸಮಾಜ ಕಸ್ತೂರಿ ಬಾ ಶಿಶುವಿಹಾರ (ರಿ), ದೊಡ್ಡಬಳ್ಳಾಪುರ ಇದರ ಕಾರ್ಯಚಟುವಟಿಕೆಗಳ ಕುರಿತು ಸಂಘಗಳ ಜಿಲ್ಲಾ ನೋಂದಣಾಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರ ದಿನಾಂಕ : 13-10-2010ರ ವರದಿಯನ್ನು ಗಮನಿಸಿದಾಗ ಸಂಘದ ಸಮಿತಿಗೆ ಚುನಾವಣೆಯನ್ನು ನಿಯಮಾನುಸಾರ ನಿರ್ವಹಿಸಿರುವುದಿಲ್ಲ ಎಂಬ ಅಂಶ ವ್ಯಕ್ತವಾಗುತ್ತದೆ. ಸಮಾಜದ ಹಿಂದಿನ ಮಹಾಸಭೆಗಳಲ್ಲಿ ಕಾರ್ಯಕಾರಿ ಸಮಿತಿಯ ಆಯ್ಕೆ ಸದಸ್ಯರುಗಳ ಕೈ ಎತ್ತುವುದರ ಮೂಲಕ ಜರುಗುತ್ತಿತ್ತು. ಸಮಾಜಕ್ಕೆ ವೀಕ್ಷಣಾಧಿಕಾರಿಯಾಗಿ ಜಿಲ್ಲಾ ನೋಂದಣಾಧಿಕಾರಿಗಳು ಒಬ್ಬ ಅಧಿಕಾರಿಯನ್ನು ನಿಯೋಜಿಸಿದ್ದು, ದಿನಾಂಕ : 29-09-2010 ರಂದು ನಡೆದ ಸರ್ವ ಸದಸ್ಯರ ಸಭೆಯಲ್ಲಿ ದಿನಾಂಕ : 24-10-2010 ರಂದು ಚುನಾವಣೆಯನ್ನು ನಡೆಸಲು ನಿರ್ಣಯಿಸಿದ್ದು, ನಿಯಮಾನುಸಾರ ಚುನಾವಣೆ ನಡೆಸಲು 123 ಸದಸ್ಯರು ಆಗ್ರಹಿಸಿರುವುದಾಗಿ ವೀಕ್ಷಣಾಧಿಕಾರಿ ವರದಿ ಮಾಡಿರುವುದಾಗಿ ತಿಳಿಸಿದ್ದಾರೆ. ಅಲ್ಲದೇ ಸಮಾಜಕ್ಕೆ ಚುನಾವಣೆ ನಡೆಸಲು ಚುನಾವಣಾಧಿಕಾರಿಯನ್ನು ನೇಮಿಸಿದ್ದರೂ ಸಮಿತಿಯು ಯಾವುದೇ ಕ್ರಮ ತೆಗೆದುಕೊಂಡಿರುವುದಿಲ್ಲ ಎಂದು ಚುನಾವಣಾಧಿಕಾರಿ ವರದಿ ಮಾಡಿರುವುದಾಗಿ ಜಿಲ್ಲಾ ನೋಂದಣಾಧಿಕಾರಿಯವರ ವರದಿಯಿಂದ ತಿಳಿದುಬರುತ್ತದೆ.

ಸಂಘದ ನಿಬಂಧನೆ ಸಂಖ್ಯೆ : 8 (ಸಿ) ರ ಮೇರೆಗೆ ಒಂದು ವರ್ಷಕ್ಕೆ ಒಮ್ಮೆ ಸರ್ವ ಸದಸ್ಯರ ಸಭೆಯಲ್ಲಿ ಒಟ್ಟು 9 ಜನರನ್ನು ಕಾರ್ಯಕಾರಿ ಸಮಿತಿಗೆ ಚುನಾಯಿಸಬೇಕು. ಅದರಂತೆ ದಿನಾಂಕ : 29-09-2010ರಂದು ಜರುಗಿದ ಮಹಾಸಭೆಯಲ್ಲಿ ಸಂಘದ ಕಾರ್ಯಕಾರಿ ಸಮಿತಿಯ ಚುನಾವಣೆಯನ್ನು ನಿಯಮಾನುಸಾರ ಜರುಗಿಸಲು ಕ್ರಮವಹಿಸಿರುವುದಿಲ್ಲ ಎಂದು ಸಂಘಗಳ ಜಿಲ್ಲಾ ನೋಂದಣಾಧಿಕಾರಿಗಳು ವರದಿಯಲ್ಲಿ ತಿಳಿಸಿದ್ದಾರೆ. ಅಲ್ಲದೆ ಸಂಘದ ಸದಸ್ಯರುಗಳು ಮತ್ತು ಕಾರ್ಯಕಾರಿ ಸಮಿತಿಯ ಮಧ್ಯೆ ಭಿನ್ನಾಭಿಪ್ರಾಯಗಳು ಬಂದಿದ್ದು, ಸಂಘದ ಅಭಿವೃದ್ಧಿಗೆ ಧಕ್ಕೆ ಉಂಟಾಗುವ ಸ್ಥಿತಿಗೆ ಅವಕಾಶವಾಗಿರುತ್ತದೆ ಹಾಗೂ ಸಂಘದಲ್ಲಿ ಸದಸ್ಯರುಗಳ ಪಟ್ಟಿಯನ್ನು ಸಮರ್ಪಕವಾಗಿ ನಿರ್ವಹಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ. ಸಂಘದ ಅಧ್ಯಕ್ಷರು ದಿ : 11-10-2010ರ ಪತ್ರದಲ್ಲಿ ಸಂಘದ ಸದಸ್ಯತ್ವದ ಪಟ್ಟಿಯಲ್ಲಿ ಕೆಲವು ಸದಸ್ಯರುಗಳನ್ನು ಕೈಬಿಟ್ಟಿರುವುದರಿಂದ ಅದನ್ನು ಸರಿಪಡಿಸಲು ಹಾಗು ಸದಸ್ಯರಿಗೆ ಭಾವ ಚಿತ್ರವಿರುವ ಗುರುತಿನ ಚೀಟಿ ನೀಡಲು ಕಾಲಾವಕಾಶಬೇಕಾಗಿರುವುದರಿಂದ ಚುನಾವಣೆ ನಡೆಸಲು ಸುಮಾರು 4 ತಿಂಗಳು ಕಾಲಾವಕಾಶಬೇಕೆಂದು ಕೋರಿದ್ದಾರೆ. ಈ ರೀತಿ ಕಾಲಾವಕಾಶ ನೀಡಲು ಕರ್ನಾಟಕ ಸಂಘಗಳ ಅಧಿನಿಯಮದಡಿ ಅವಕಾಶವಿರುವುದಿಲ್ಲವೆಂದು ವರದಿ ಮಾಡಿದ್ದು, ಸಂಘದ ಆಡಳಿತದಲ್ಲಿ ಶೂನ್ಯತೆ ಉಂಟಾಗಿರುವುದರಿಂದ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವ ಅವಶ್ಯಕತೆ ಇರುವುದಾಗಿ ಅಭಿಪ್ರಾಯಪಟ್ಟಿದ್ದಾರೆ.

ಮೇಲೆ ಓದಲಾದ (3)ರ ಸಂಘದ ಅಧ್ಯಕ್ಷರ/ಕಾರ್ಯದರ್ಶಿಯವರ ದಿ : 27-12-2010ರ ಹೇಳಿಕೆಯನ್ನು ಗಮನಿಸಿದಾಗ ದಿನಾಂಕ : 24-10-2010ರಂದು ನಡೆದ ವಿಶೇಷ ಸಭೆಯಲ್ಲಿ 2010-11ನೇ ಸಾಲಿಗೆ ಮಹಿಳಾ ಸಮಾಜ ಕಸ್ತೂರಿ ಬಾ ಶಿಶುವಿಹಾರ (ರಿ)ಗೆ 9 ಜನ ನಿರ್ದೇಶಕರನ್ನು ಸರ್ವಾನುಮತದಿಂದ ಕೈ ಎತ್ತುವ ಮೂಲಕ ಆಯ್ಕೆ ಮಾಡಲಾಗಿದೆ ಎಂದು ತಿಳಿಸಿದ್ದಾರೆ. ಅಲ್ಲದೇ ಸಮಾಜದಲ್ಲಿ ಈ ಹಿಂದೆಯೂ ಸರ್ವಸದಸ್ಯರ ಸಭೆಯನ್ನು ಸರಿಯಾಗಿ ನಡೆಸಿರುವುದಿಲ್ಲವೆಂಬ ಅಂಶವನ್ನು ತಮ್ಮ ಹೇಳಿಕೆಯಲ್ಲಿ ಪ್ರಸ್ತಾಪಿಸಿದ್ದಾರೆ.

ಸಮಾಜದ ಬೈಲಾ ರೀತ್ಯಾ ಒಂದು ವರ್ಷಕ್ಕೆ ಒಮ್ಮೆ ಸರ್ವಸದಸ್ಯರ ಸಭೆಯಲ್ಲಿ ಕಾರ್ಯಕಾರಿ ಸಮಿತಿಗೆ ಸದಸ್ಯರನ್ನು ಚುನಾಯಿಸಬೇಕಾಗಿರುತ್ತದೆ. ಸಮಾಜದ ಓದಲಾದ (3)ರ ಪತ್ರವನ್ನು ಗಮನಿಸಿದಾಗ ದಿನಾಂಕ : 24-10-2010ರಂದು ನಡೆದಿದೆ ಎನ್ನಲಾದ ಚುನಾವಣೆಯೂ ಕ್ರಮವಾಗಿದೆ ಎಂದು ಹೇಳಲು ಬರುವುದಿಲ್ಲ ಕಾರಣ ಚುನಾವಣೆ ನಡೆಸುವ ಸಂಬಂಧ ಚುನಾವಣಾಧಿಕಾರಿಯು, ಚುನಾವಣಾ ವೇಳಾಪಟ್ಟಿಯನ್ನು ಪ್ರಕಟಿಸಿ, ಅದನ್ನು ಎಲ್ಲಾ ಸದಸ್ಯರಿಗೂ ಕಳುಹಿಸಿ, ಉಮೇದುವಾರಿಕೆ ಅರ್ಜಿ/ನಾಮನಿರ್ದೇಶನ ಅರ್ಜಿ ಸ್ವೀಕರಿಸುವಿಕೆ, ಪರಿಶೀಲನೆ, ಉಮೇದುವಾರಿಕೆ ವಾಪಸ್ಸು, ಅಂತಿಮ ಸ್ಪರ್ಧಿಗಳ ಪಟ್ಟಿ ಅಗತ್ಯತೆವೆನಿಸಿದರೆ ಚುನಾವಣೆ ನಡೆಸುವಿಕೆ ಈ ರೀತಿ ವಿವಿಧ ಹಂತಗಳಲ್ಲಿ ಚುನಾವಣಾ ನಡವಳಿಗಳು ಕ್ರಮ ಪ್ರಕಾರ ನಡೆಯಬೇಕಾಗಿದ್ದು, ಇದು ನ್ಯಾಯೋಚಿತ ಕ್ರಮವಾಗುತ್ತದೆ. ಆದರೆ ಇದ್ಯಾವುದನ್ನು ನಡೆಸದೆ, ಚುನಾವಣೆ ನಡೆದಿದೆ ಎಂಬ ನಿರ್ಣಯಕ್ಕೆ ಬರುವುದು ಸಮಂಜಸವಾಗಿರುವುದಿಲ್ಲ. ಅಲ್ಲದೇ ಮೇಲ್ಕಂಡ ಕ್ರಮ ಅನುಸರಿಸಿ ಚುನಾವಣೆಯನ್ನು ನಡೆಸದಿರುವುದು ಸಮಾಜದ ಆಡಳಿತ ಸಮಿತಿಯ ಕರ್ತವ್ಯಲೋಪವಾಗುತ್ತದೆ.

ಮೇಲೆ ವಿವರಿಸಲಾದ ಎಲ್ಲಾ ಅಂಶಗಳನ್ನು ಗಮನಿಸಿದಾಗ ಮಹಿಳಾ ಸಮಾಜ ಕಸ್ತೂರಿ ಬಾ ಶಿಶುವಿಹಾರ (ರಿ), ಸಂಘದಲ್ಲಿ ಆಡಳಿತ ಸಮಿತಿ ಅವಧಿ ಮುಗಿದಿದ್ದು, ನೂತನ ಆಡಳಿತ ಸಮಿತಿಯನ್ನು ಕಾನೂನು ಕ್ರಮ ಅನುಸರಿಸಿ ರಚನೆ ಮಾಡದೇ ಇರುವುದು ವ್ಯಕ್ತವಾಗುತ್ತದೆ. ಕರ್ನಾಟಕ ಸಂಘಗಳ ಅಧಿನಿಯಮ 1960ರ ಪ್ರಕರಣ 27(ಎ) ರೀತ್ಯಾ ವಾರ್ಷಿಕ ಮಹಾಸಭೆಯನ್ನು ನಡೆಸದಿರುವಿಕೆ ಮತ್ತು ಆಡಳಿತ ಸಮಿತಿ ಅವಧಿ ಮುಗಿದಿರುವ ಸಂಘದಲ್ಲಿ ನೂತನ ಆಡಳಿತ ಸಮಿತಿಯನ್ನು ಯಾವುದೇ ಕಾರಣದಿಂದಾಗಲೀ ರಚನೆ ಮಾಡದಿರುವ ಪ್ರಕರಣಗಳಲ್ಲಿ ಸರ್ಕಾರವು ರಿಜಿಸ್ಟ್ರಾರ್‌ರವರ ವರದಿ ಆಧರಿಸಿ ಪರಿಶೀಲಿಸಿ ವಿಚಾರಣೆ ಮಾಡಿ ಅಂತಹ ಸಂಘಕ್ಕೆ ಸರ್ಕಾರವು ಆಡಳಿತಗಾರರನ್ನು ನೇಮಿಸಲು ಅವಕಾಶವಿರುತ್ತದೆ.

ಮೇಲ್ಕಂಡ ಸಮಾಜದ ನ್ಯೂನತೆಗಳ ಸಂಬಂಧ ಅಂದರೆ ಆಡಳಿತ ಸಮಿತಿ ಅವಧಿ ಮುಗಿದಿದ್ದು, ನೂತನ ಆಡಳಿತ ಸಮಿತಿಗೆ ರಚನೆ ಮಾಡದಿರುವ ಬಗ್ಗೆ ಸಹಕಾರ ಸಂಘಗಳ ನಿಬಂಧಕರು/ಸಂಘಗಳ ಜಿಲ್ಲಾ ನೋಂದಣಾಧಿಕಾರಿಯವರು ನೀಡಿರುವ ವರದಿಯನ್ನು ಆಧರಿಸಿ, ಸಂಘಕ್ಕೆ

ಕರ್ನಾಟಕ ಸಂಘಗಳ ಅಧಿನಿಯಮ 1960ರ ಪ್ರಕರಣ 27ಎ ರೀತ್ಯಾ ಏಕೆ ಆಡಳಿತಗಾರರನ್ನು ನೇಮಿಸಬಾರದು ಎಂಬ ಬಗ್ಗೆ ಸಂಘದ ಕಾರ್ಯಕಾರಿ ಸಮಿತಿಯ ಅಧ್ಯಕ್ಷರು/ಕಾರ್ಯದರ್ಶಿಯವರಿಗೆ ಕಾರಣ ಕೇಳುವ ನೋಟಿಸ್ಸನ್ನು ನೀಡಿ ತಮ್ಮ ಹೇಳಿಕೆ ಏನಾದರೂ ಇದ್ದಲ್ಲಿ ಸಮಜಾಯಿಷಿ ನೀಡಲು ಸೂಕ್ತ ಕಾಲಾವಕಾಶವನ್ನು ನೀಡಲಾಗಿದೆ ಮತ್ತು ಅವರು ಲಿಖಿತವಾಗಿ ಸಲ್ಲಿಸಲಾದ ಲಿಖಿತ ಹೇಳಿಕೆಯನ್ನು ಪರಿಗಣಿಸಲಾಗಿದೆ. ಮೇಲೆ ಓದಲಾದ (3)ರ ಲಿಖಿತ ಹೇಳಿಕೆಯಲ್ಲಿ ಸಂಘಕ್ಕೆ ನೂತನ ಸಮಿತಿ ಆಯ್ಕೆ ಮಾಡಲಾಗಿದೆ ಎಂಬ ಉತ್ತರ ಒಪ್ಪತಕ್ಕದ್ದಾಗಿರುವುದಿಲ್ಲವಾದ ಕಾರಣ, ನೂತನ ಆಡಳಿತ ಸಮಿತಿಗೆ ನಿಯಮಾನುಸಾರ ಚುನಾವಣೆಯನ್ನು ನಡೆಸಿ ನೂತನ ಆಡಳಿತ ಸಮಿತಿ ರಚನೆ ಮಾಡದಿರುವುದು ಸಾಬೀತಾಗಿರುತ್ತದೆ. ಸರ್ಕಾರವು ಈ ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಮೇಲ್ಕಂಡ ಸಮಾಜಕ್ಕೆ ಪ್ರಕರಣ 27–ಎರ ಅಡಿಯಲ್ಲಿ ಸಮಾಜದ ಹಿತದೃಷ್ಟಿ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ಆಡಳಿತಗಾರರನ್ನು ನೇಮಿಸುವುದು ಸೂಕ್ತ ಎಂದು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಇ 156 ಸಸಂನೋ 2010, ಬೆಂಗಳೂರು, ದಿನಾಂಕ : 13ನೇ ಜನವರಿ 2011**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮಹಿಳಾ ಸಮಾಜ ಕಸ್ತೂರಿ ಬಾ ಶಿಶುವಿಹಾರ (ರಿ), ಹಳೆ ಬಸ್ ನಿಲ್ದಾಣ ಸಮೀಪ, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಈ ಸಂಸ್ಥೆಯ ಆಡಳಿತ ಮಂಡಳಿಯ ಅವಧಿಯು ಮುಗಿದಿದ್ದು ಹಾಗೂ ಸಂಘದ ಆಡಳಿತ ಮಂಡಳಿಯು ನೂತನ ಆಡಳಿತ ಸಮಿತಿಯನ್ನು ಕಾನೂನು ಬದ್ಧವಾಗಿ ಚುನಾವಣೆ ನಡೆಸಿ ರಚಿಸುವಲ್ಲಿ ವಿಫಲವಾಗಿರುವುದು ದೃಢಪಟ್ಟಿರುವುದರಿಂದ, ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ 1960ರ ಪ್ರಕರಣ 27–ಎ ರ ಅಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ದೊಡ್ಡಬಳ್ಳಾಪುರ ರವರನ್ನು ಸಮಾಜದ ಆಡಳಿತ ವ್ಯವಹಾರಗಳನ್ನು ನಿರ್ವಹಿಸಲು ಆಡಳಿತಗಾರರನ್ನಾಗಿ 6 ತಿಂಗಳ ಅವಧಿಗೆ ಅಥವಾ ಸದರಿ ಸಂಸ್ಥೆಗೆ ಕಾನೂನು ಬದ್ಧವಾಗಿ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೊ ಅಲ್ಲಿಯವರೆಗೆ ನೇಮಿಸಿದೆ. ಆಡಳಿತಗಾರರು ಸಂಘಗಳ ನೋಂದಣಿ ಅಧಿನಿಯಮ 1960, ಸಂಘಗಳ ನೋಂದಣಿ ನಿಯಮಗಳು/ಸಮಾಜದ ನಿಬಂಧನೆಗಳ ಅವಕಾಶಗಳನ್ನು ಗಮನಿಸಿ ಸಂಘದ ಆಡಳಿತ ಸಮಿತಿಗೆ ಚುನಾವಣೆ ನಡೆಸಿ, ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ.

ಪಿ. ಆರ್. 274

## ಸಹಕಾರ ಸಚಿವಾಲಯ

**ವಿಷಯ** : ಮಾಗಡಿ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿಯಮಿತ, ಮಾಗಡಿ ಇದರ ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ** : ಸಹಕಾರ ಸಂಘಗಳ ಅಪರ ನಿಬಂಧಕರ ಪತ್ರಸಂಖ್ಯೆ : ಎಂಕೆಟಿ 1–ಎಂಸಿಎಸ್/93/2010–11, ದಿನಾಂಕ : 12–11–2010

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 12–11–2010ರ ಪತ್ರದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರು, ಬೆಂಗಳೂರು ಇವರು ಮಾಗಡಿ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿಯಮಿತ, ಮಾಗಡಿ ಇದರ ಆಡಳಿತಾಧಿಕಾರಿಯವರ ಅಧಿಕಾರಾವಧಿಯನ್ನು ದಿನಾಂಕ : 19–09–2010ರಿಂದ ಮುಂದಿನ 6 ತಿಂಗಳ ಅವಧಿಗೆ ವಿಸ್ತರಿಸಲು ಶಿಫಾರಸು ಮಾಡಿರುತ್ತಾರೆ.

ಮಾಗಡಿ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿಯಮಿತ, ಮಾಗಡಿ ಇದರ ಆಡಳಿತ ಮಂಡಳಿಯು ಕಾಯ್ದೆ, ನಿಯಮ ಹಾಗೂ ಸಂಘದ ಉಪನಿಯಮಗಳಿಗೆ ವಿರುದ್ಧವಾಗಿ ಕೆಲಸ ನಿರ್ವಹಿಸುತ್ತಿರುವುದರಿಂದ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30 (1)ನ್ನು ರದ್ದುಗೊಳಿಸಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರ ಉಪವಿಭಾಗ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸಿ ತದನಂತರ ವಿವರ ಕೋರಿಕೆ ಮೇರೆಗೆ ಆಡಳಿತಾಧಿಕಾರಿಯವರ ಅವಧಿಯನ್ನು 2 ಬಾರಿ ವಿಸ್ತರಿಸಿದ್ದು, ಈ ಅವಧಿಯು ದಿನಾಂಕ : 19–09–2010ಕ್ಕೆ ಕೊನೆಗೊಂಡಿದ್ದು, ಸಂಘದ ಕೆಲವು ಆರೋಪಗಳನ್ನು ಸರಿಪಡಿಸಲು ತೊಡಕುಗಳಿದ್ದು, ಇನ್ನೂ ಆರು ತಿಂಗಳ ಕಾಲ ಅವಧಿ ವಿಸ್ತರಿಸುವಂತೆ ಕೋರಿರುತ್ತಾರೆ.

ಅಂತೆಯೇ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಇ 191 ಸಂಮಾಸ 2010, ಬೆಂಗಳೂರು, ದಿನಾಂಕ : 10ನೇ ಜನವರಿ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮಾಗಡಿ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿಯಮಿತ, ಮಾಗಡಿ ಇದರ ಆಡಳಿತಾಧಿಕಾರಿಗಳ ಅಧಿಕಾರಾವಧಿಯನ್ನು ದಿನಾಂಕ : 19–09–2010 ರಿಂದ ಮುಂದಿನ ಆರು ತಿಂಗಳ ಅವಧಿಗೆ ವಿಸ್ತರಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳನ್ನು ಮಾರ್ಪಡಿಸಿ ಅನುಮತಿ ನೀಡಲಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ಉಪಬಂಧಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ : 18–03–2011ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 121 ರ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ.

ಪಿ. ಆರ್. 275

## ಸಹಕಾರ ಸಚಿವಾಲಯ

**ವಿಷಯ** : ಸಹಕಾರಿ ಬ್ಯಾಂಕುಗಳಲ್ಲಿ ಕೋರ್ ಬ್ಯಾಂಕಿಂಗ್ ವ್ಯವಸ್ಥೆಯನ್ನು ಅಳವಡಿಸಿಕೊಳ್ಳುವ ಬಗ್ಗೆ.

**ಓದಲಾಗಿದೆ** : ಎನ್.ಐ.ಸಿ. ಅವರ ಪತ್ರ ಸಂಖ್ಯೆ : 7(96) ಕೆಎಸ್‌ಯು–ಎಸ್10/2010–451, ದಿನಾಂಕ : 21–12–2010

**ಪ್ರಸ್ತಾವನೆ :**

ಎನ್.ಐ.ಸಿ., ಬೆಂಗಳೂರು ಇವರು ಸಹಕಾರಿ ಬ್ಯಾಂಕುಗಳಲ್ಲಿ ಕೋರ್ ಬ್ಯಾಂಕಿಂಗ್ ವ್ಯವಸ್ಥೆಯನ್ನು ಅಳವಡಿಸಿಕೊಳ್ಳುವ ಬಗ್ಗೆ. ಪ್ರಸ್ತಾವೆಯನ್ನು ಹಾಗೂ ಈ ವಿಷಯವನ್ನು ಎಸ್.ಎಲ್.ಐ.ಸಿ. ಸಭೆಯಲ್ಲಿ ಹಾಗೂ ಮಾಸಿಕ ಸಭೆಯಲ್ಲಿ ಚರ್ಚಿಸಲಾಗಿ ವಿವಿಧ ರಾಜ್ಯಗಳಲ್ಲಿ ಅಂದರೆ ಆಂಧ್ರಪ್ರದೇಶ ಮತ್ತು ತಮಿಳುನಾಡು ಅಳವಡಿಸಿಕೊಂಡಿರುವ ವ್ಯವಸ್ಥೆಯನ್ನು ತುಲನಾತ್ಮಕವಾಗಿ ಅಭ್ಯಸಿಸಿ ಸೂಕ್ತವಾದ ವ್ಯವಸ್ಥೆಯನ್ನು ಅಳವಡಿಸಿಕೊಳ್ಳುವ ಸಲುವಾಗಿ ಒಂದು ಸಮಿತಿಯನ್ನು ರಚಿಸಲು ತೀರ್ಮಾನಿಸಲಾಗಿದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಒ 04 ಸಿಸಿಬಿ 2011, ದಿನಾಂಕ : 10ನೇ ಜನವರಿ 2011**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಈ ಕೆಳಕಂಡ ಅಧಿಕಾರಿಗಳ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 01. | ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು | ಅಧ್ಯಕ್ಷರು |
| 02. | ಸಹಕಾರ ಸಂಘಗಳ ಅಪರ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು | ಸದಸ್ಯರು |
| 03 | ಸಹಕಾರ ಸಂಘಗಳ ಜಂಟಿ ನಿಬಂಧಕರು (ಐಸಿಡಿಪಿ), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು | ಸದಸ್ಯರು |
| 04 | ಕಾರ್ಯದರ್ಶಿ, ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು | ಸದಸ್ಯರು |
| 05. | ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಜಿಲ್ಲಾ ಮತ್ತು ಗ್ರಾಮಾಂತರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ಬೆಂಗಳೂರು | ಸದಸ್ಯರು |
| 06. | ವ್ಯವಸ್ಥಾಪಕ ನಿರ್ದೇಶಕರು, ಮಂಡ್ಯ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ಮಂಡ್ಯ | ಸದಸ್ಯರು |
| 07. | ವ್ಯವಸ್ಥಾಪಕ ನಿರ್ದೇಶಕರು, ಕೆ.ಸಿ.ಸಿ. ಬ್ಯಾಂಕ್ ನಿ., ಧಾರವಾಡ | ಸದಸ್ಯರು |
| 08. | ಸಹಕಾರ ಸಂಘಗಳ ಜಂಟಿ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು. | ಕಾರ್ಯದರ್ಶಿ |

ಸದರಿ ಸಮಿತಿಯು ಅವಶ್ಯವಿದ್ದಲ್ಲಿ ತಮಿಳುನಾಡು ಹಾಗೂ ಆಂಧ್ರಪ್ರದೇಶಗಳಿಗೆ ತೆರಳಿ ಆ ರಾಜ್ಯಗಳಲ್ಲಿಯ ವ್ಯವಸ್ಥೆಯನ್ನು ಪರಿಶೀಲಿಸಿ ಸರ್ಕಾರಕ್ಕೆ ಮೂವತ್ತು ದಿನಗಳೊಳಗಾಗಿ ವರದಿಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್. ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

ಪಿ. ಆರ್. 276

## ಒಳಾಡಳಿತ ಸಚಿವಾಲಯ

**ವಿಷಯ** : ಕರ್ನಾಟಕ ಸ್ಟೇಟ್ ಇಂಡಸ್ಟ್ರಿಯಲ್ ಸೆಕ್ಯೂರಿಟಿ ಫೋರ್ಸ್ (KSISF) ಘಟಕವನ್ನು ರಚಿಸುವ ಬಗ್ಗೆ

**ಓದಲಾಗಿದೆ** : ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ : ಆರ್.ಎಲ್.ಎನ್[5]13/2003–04[ಎ], ದಿನಾಂಕ : 24/26–11–2009.

**ಪ್ರಸ್ತಾವನೆ :**

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಇವರು ಮೇಲೆ ಓದಲಾದ ಪತ್ರದಲ್ಲಿ, ಕರ್ನಾಟಕ ರಾಜ್ಯದಲ್ಲಿ ಇತ್ತೀಚಿನ ದಿನಗಳಲ್ಲಿ ಕೈಗಾರಿಕಾ ವಲಯ ಹಾಗೂ ಸೇವಾ ಕ್ಷೇತ್ರಗಳು ಕ್ಷಿಪ್ರ ಗತಿಯಲ್ಲಿ ಬೆಳವಣಿಗೆಯನ್ನು ಹೊಂದುತ್ತಿದೆ. ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದ ಆರ್ಥಿಕ ವಲಯಗಳು ಹಾಗೂ ಹಲವಾರು ಐಟಿಬಿಟಿ ಕಂಪನಿಗಳು ಬೃಹತ್ ಪ್ರಮಾಣದಲ್ಲಿ ಬೆಂಗಳೂರು ನಗರಕ್ಕೆ ವಲಸೆ ಬರುತ್ತಿದ್ದು ಇವುಗಳ ಕಾರ್ಯವ್ಯಾಪ್ತಿ ದಿನದಿಂದ ದಿನಕ್ಕೆ ವಿಸ್ತರಿಸುತ್ತಾ ನಡೆದಿದೆ. ಇತ್ತೀಚಿನ ದಿನಗಳಲ್ಲಿ ಭಯೋತ್ಪಾದಕರು ಹಾಗೂ ನಕ್ಸಲೀಯರು ಭಯೋತ್ಪಾದಕ ಚಟುವಟಿಕೆಗಳನ್ನು ಹಾಗೂ ವಿಧ್ವಂಸಕ ಕೃತ್ಯಗಳನ್ನು ರಾಜ್ಯದೆಲ್ಲೆಡೆ ನಡೆಸಲು ಸಂಚು ರೂಪಿಸುತ್ತಿದ್ದಾರೆ. ರಾಜ್ಯದಲ್ಲಿರುವ ಅಣು ವಿದ್ಯುತ್ ಉತ್ಪಾದನಾ ಕೇಂದ್ರಗಳು, ಜಲ ವಿದ್ಯುತ್ ಉತ್ಪಾದನಾ ಕೇಂದ್ರಗಳು ಹಾಗೂ ಖ್ಯಾತ ಐಟಿ ಮತ್ತು ಬಿಟಿಗಳಿಗೆ ಭದ್ರತೆಯನ್ನು ಒದಗಿಸಲು ಕೇಂದ್ರ ಸರ್ಕಾರವು ಈಗಾಗಲೇ ಕಾಯ್ದೆ ಮಾಡಿ ಇಂತಹ ಸ್ಥಾವರಗಳಿಗೆ/ಕಂಪನಿಗಳಿಗೆ ಪರಿಪೂರ್ಣ ಭದ್ರತೆಯನ್ನು ಒದಗಿಸುವ ಸಲುವಾಗಿ Central Industrial Security Force ದಳವನ್ನು ಸ್ಥಾಪಿಸಲಾಗಿದೆ. ರಾಜ್ಯದಲ್ಲಿ ಸರ್ಕಾರ ಮತ್ತು ಖಾಸಗಿ ವಲಯ ಎರಡರಿಂದಲೂ ಭದ್ರತಾ ಕರ್ತವ್ಯಗಳಿಗಾಗಿ ದಿನದಿಂದ ದಿನಕ್ಕೆ ಬೇಡಿಕೆಗಳು ಹೆಚ್ಚುತ್ತಿದೆ ಮತ್ತು ಪ್ರಸ್ತಾವಿತ ಕರ್ನಾಟಕ ಇಂಡಸ್ಟ್ರಿಯಲ್ ಸೆಕ್ಯೂರಿಟಿ ಫೋರ್ಸ್‌ನ ಸಿಬ್ಬಂದಿಯನ್ನು ಭದ್ರತೆ ಸಲುವಾಗಿ ನಿಯೋಜಿಸಿದಲ್ಲಿ, ಸಂಬಂಧಪಟ್ಟ ಕೈಗಾರಿಕಾ ಹಾಗೂ ಸ್ಥಾವರಗಳ ಪ್ರಾಧಿಕಾರಗಳೇ ಸಿಬ್ಬಂದಿಗಳ ನಿಯೋಜನೆಯ ಖರ್ಚು ವೆಚ್ಚಗಳನ್ನು ಭರಿಸಬೇಕಾಗಿರುತ್ತದೆ. ಆದ್ದರಿಂದ ಈ ಪ್ರಸ್ತಾವನೆಯನ್ನು ಬಹುಪಾಲು

ಆವರ್ತಕ ವೆಚ್ಚವನ್ನು ಎರವಲು ಸೇವೆಯನ್ನು ಪಡೆದ ಘಟಕವೇ ಹಿಂಭರಿಸುವುದರಿಂದ ಸರ್ಕಾರದ ಮೇಲೆ ಹೆಚ್ಚಿನ ಆರ್ಥಿಕ ಹೊರೆ ಬೀಳುವುದಿಲ್ಲ. ಆದ್ದರಿಂದ, ದೆಹಲಿಯಲ್ಲಿರುವ Central Industrial Security Force ಮತ್ತು ಆಂಧ್ರಪ್ರದೇಶದಲ್ಲಿರುವ Special Protection Group ಮಾದರಿಯಲ್ಲಿ ಪೊಲೀಸ್ ಇಲಾಖೆಯ ನಿಯಂತ್ರಣದಲ್ಲಿ ಕರ್ನಾಟಕ ಸ್ಟೇಟ್ ಇಂಡಸ್ಟ್ರಿಯಲ್ ಸೆಕ್ಯೂರಿಟಿ ಫೋರ್ಸ್ ಘಟಕವನ್ನು (KSISF) ವಿವಿಧ ದರ್ಜೆಯ 1060 ಹುದ್ದೆಗಳೊಂದಿಗೆ ರಚಿಸಲು ಸರ್ಕಾರದ ಮಂಜೂರಾತಿ ಕೋರಿರುತ್ತಾರೆ.

ದೇಶದಾದ್ಯಂತ ದಿನೇ ದಿನೇ ಹೆಚ್ಚುತ್ತಿರುವ ಭಯೋತ್ಪಾದನೆಯ ಹಿನ್ನೆಲೆಯಲ್ಲಿ ಸರ್ಕಾರದ ಪ್ರಮುಖ ಅಣೆಕಟ್ಟುಗಳು/ನೀರಾವರಿ ಯೋಜನೆಗಳು/ವಿದ್ಯುತ್ ಯೋಜನೆಗಳು/ಅಣುಶಕ್ತಿ ಸ್ಥಾವರಗಳು/ ಖಾಸಗಿ ವಲಯದ ಐಟಿ-ಬಿಟಿ ಕಂಪನಿಗಳು/ಸರ್ಕಾರಿ ವಲಯದ ಕಂಪನಿಗಳಿಗೆ ತಕ್ಷಣ ಭದ್ರತೆ ಒದಗಿಸುವ ಸಲುವಾಗಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಪೊಲೀಸ್ ವ್ಯವಸ್ಥೆಗಿಂತ ಭಿನ್ನವಾದ ನುರಿತ ತರಬೇತಿ ಹೊಂದಿದ ಮತ್ತು ವೃತ್ತಿನಿರತ ಪೊಲೀಸ್ ದಳವನ್ನೊಳಗೊಂಡ ಸುರಕ್ಷಿತವಾದ ರಕ್ಷಣಾ/ಕಾರ್ಯ ವ್ಯವಸ್ಥೆಯನ್ನು ಒದಗಿಸುವ ಅವಶ್ಯಕತೆಯನ್ನು ಸರ್ಕಾರವು ಮನಗಂಡಿದೆ. ಮಾನ್ಯ ಕೇಂದ್ರ ಗೃಹ ಸಚಿವರು ಮಾನ್ಯ ಮುಖ್ಯಮಂತ್ರಿಯವರಿಗೆ ಸಿಐಎಸ್‌ಎಫ್ ಘಟಕಕ್ಕೆ ದೇಶದಾದ್ಯಂತ ಹೆಚ್ಚುತ್ತಿರುವ ಬೇಡಿಕೆಯನ್ನು ಪೂರೈಸಲು ಸಾಧ್ಯವಿಲ್ಲದೇ ಇರುವುದರಿಂದ, ರಾಜ್ಯವು ತನ್ನದೇ ಆದ ಸ್ಟೇಟ್ ಇಂಡಸ್ಟ್ರಿಯಲ್ ಸೆಕ್ಯೂರಿಟಿ ಫೋರ್ಸ್ ಘಟಕವನ್ನು ರಚಿಸುವಂತೆ ಒತ್ತಾಯಿಸಿರುತ್ತಾರೆ. ಈ ವಿಷಯವನ್ನು ಕೇಂದ್ರ ಸರ್ಕಾರವೂ ಸಹ ದೇಶದ ಭದ್ರತಾ ವ್ಯವಸ್ಥೆಯ ಬಗ್ಗೆ ವರ್ಷದಲ್ಲಿ ಎರಡು ಬಾರಿ ಮಾನ್ಯ ಪ್ರಧಾನ ಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆಯುವ ಮುಖ್ಯಮಂತ್ರಿಗಳ ಸಮ್ಮೇಳನದ ಕಾರ್ಯಸೂಚಿಯಲ್ಲಿ ಸೇರ್ಪಡೆ ಮಾಡಿ ವಿಮರ್ಶೆ ನಡೆಸುತ್ತಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ಸ್ಟೇಟ್ ಇಂಡಸ್ಟ್ರಿಯಲ್ ಸೆಕ್ಯೂರಿಟಿ ಫೋರ್ಸ್ (KSISF) ಘಟಕವನ್ನು ರಚಿಸುವ ಬಗ್ಗೆ ಸರ್ಕಾರ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 05 ಪಿಓಪಿ 2011, ಬೆಂಗಳೂರು, ದಿನಾಂಕ : 14ನೇ ಜನವರಿ 2011**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಪೊಲೀಸ್ ಇಲಾಖೆಯ ನಿಯಂತ್ರಣದಲ್ಲಿ ಕರ್ನಾಟಕ ಸ್ಟೇಟ್ ಇಂಡಸ್ಟ್ರಿಯಲ್ ಸೆಕ್ಯೂರಿಟಿ ಫೋರ್ಸ್ (KSISF) ಘಟಕವನ್ನು ಈ ಆದೇಶಕ್ಕೆ ಲಗತ್ತಿಸಿದ ಅನುಬಂಧ-1ರಲ್ಲಿರುವಂತೆ ಅಂದಾಜು ರೂ. 19,87,55,628/-ಗಳ (ಹತ್ತೊಂಬತ್ತು ಕೋಟಿ ಎಂಬತ್ತೇಳು ಲಕ್ಷ ಐವತ್ತೈದು ಸಾವಿರದ ಆರುನೂರ ಇಪ್ಪತ್ತೆಂಟು ರೂಪಾಯಿಗಳು ಮಾತ್ರ) ವೆಚ್ಚದಲ್ಲಿ 1060 ಬಲವುಳ್ಳ ಅಧಿಕಾರಿ/ ಸಿಬ್ಬಂದಿಗಳ ಹುದ್ದೆಗಳೊಂದಿಗೆ ರಚಿಸಲು ಸರ್ಕಾರದ ಮಂಜೂರಾತಿ ನೀಡಿದೆ.

2) ಸದರಿ ಕರ್ನಾಟಕ ಸ್ಟೇಟ್ ಇಂಡಸ್ಟ್ರಿಯಲ್ ಸೆಕ್ಯೂರಿಟಿ ಫೋರ್ಸ್ ಘಟಕಕ್ಕೆ (KSISF) ಅಗತ್ಯವಿರುವ ಸಾರಿಗೆ, ವೈರ್‌ಲೆಸ್ ಸಾಧನಗಳು ಹಾಗೂ ಶಸ್ತ್ರಾಸ್ತ್ರ ಮತ್ತು ಮದ್ದುಗುಂಡುಗಳ ಖರೀದಿಗೆ ತಗಲುವ ಅಂದಾಜು ಅನಾವರ್ತಕ ವೆಚ್ಚ ರೂ. 5,99,26,820/-ಗಳನ್ನು (ಐದು ಕೋಟಿ ತೊಂಬತ್ತೊಂಬತ್ತು ಲಕ್ಷ ಇಪ್ಪತ್ತಾರು ಸಾವಿರದ ಎಂಟುನೂರ ಇಪ್ಪತ್ತು ರೂಪಾಯಿಗಳು ಮಾತ್ರ) ಅನುಬಂಧ-II ರಲ್ಲಿ ವಿವರಿಸಿರುವಂತೆ ಮಂಜೂರಾದ ವಾಹನಗಳ ನಿರ್ವಹಣೆಗಾಗಿ ತಗಲುವ ಅಂದಾಜು ಅನಾವರ್ತಕ ವೆಚ್ಚ ರೂ. 59,28,000/- ಗಳನ್ನು (ಐವತ್ತೊಂಬತ್ತು ಲಕ್ಷದ ಇಪ್ಪತ್ತೆಂಟು ಸಾವಿರ ರೂಪಾಯಿಗಳು ಮಾತ್ರ) ಅನುಬಂಧ- III ರಲ್ಲಿ ವಿವರಿಸಿರುವಂತೆ ಹಾಗೂ ಸಮವಸ್ತ್ರ ಮತ್ತು ಕಿಟ್ ಸಾಮಗ್ರಿಗಳ ಖರೀದಿಗೆ ತಗಲುವ ಅಂದಾಜು ವೆಚ್ಚ ರೂ. 14,50,115/-ಗಳನ್ನು (ಹದಿನಾಲ್ಕು ಲಕ್ಷ ಐವತ್ತು ಸಾವಿರದ ಒಂದುನೂರ ಹದಿನೈದು ರೂಪಾಯಿಗಳು ಮಾತ್ರ) ಅನುಬಂಧ- IV ರಲ್ಲಿ ವಿವರಿಸಿರುವಂತೆ ಭರಿಸಲು ಸಹ ಮಂಜೂರಾತಿ ನೀಡಿದೆ.

3) ಮೇಲಿನ ವೆಚ್ಚಗಳಿಗೆ ಅಗತ್ಯವಿರುವ ಹೆಚ್ಚುವರಿ ಅನುದಾನದ ಮಂಜೂರಾತಿಗೆ ಸಂಬಂಧಿಸಿದಂತೆ ಪ್ರತ್ಯೇಕ ಆದೇಶವನ್ನು ಹೊರಡಿಸಲಾಗುವುದು. ಆದರೆ, ಸದರಿ ಅನುದಾನ ಬಿಡುಗಡೆಯನ್ನು ಕಾಯ್ದಿರಿಸಿ ಕರ್ನಾಟಕ ಸ್ಟೇಟ್ ಇಂಡಸ್ಟ್ರಿಯಲ್ ಸೆಕ್ಯೂರಿಟಿ ಫೋರ್ಸ್ ಘಟಕಕ್ಕೆ (KSISF) ಬೇಕಾದ ಪೊಲೀಸ್ ಸಿಬ್ಬಂದಿಯ ನೇಮಕ ಮತ್ತು ಅವರಿಗೆ ಸೂಕ್ತ ತರಬೇತಿ ನೀಡಲು ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಕೂಡಲೇ ಅಗತ್ಯ ಕ್ರಮ ತೆಗೆದುಕೊಳ್ಳತಕ್ಕದ್ದು. ಮುಂದುವರೆದು, ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಕರ್ನಾಟಕ ಸ್ಟೇಟ್ ಇಂಡಸ್ಟ್ರಿಯಲ್ ಸೆಕ್ಯೂರಿಟಿ ಫೋರ್ಸ್ ಘಟಕಕ್ಕೆ (KSISF) ಗೆ ಮಂಜೂರಾಗಿರುವ ವಾಹನಗಳಿಗೆ ಬೇಕಾದ ಹಣ ಬಿಡುಗಡೆಯಾದ ಮೇಲೆ ಮಾತ್ರ ಅವುಗಳನ್ನು ನಿಯಮಾನುಸಾರ ಖರೀದಿಸಲು ಕ್ರಮ ಕೈಗೊಳ್ಳತಕ್ಕದ್ದು.

4) 2011-12ನೇ ಸಾಲಿನ ಆಯವ್ಯಯದಲ್ಲಿ ಇದಕ್ಕಾಗಿ ಅಗತ್ಯವಿರುವ ಅನುದಾನವನ್ನು ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಕಲ್ಪಿಸಿಕೊಳ್ಳಲು ಕ್ರಮ ತೆಗೆದುಕೊಳ್ಳತಕ್ಕದ್ದು.

5) ಕರ್ನಾಟಕ ಸ್ಟೇಟ್ ಇಂಡಸ್ಟ್ರಿಯಲ್ ಸೆಕ್ಯೂರಿಟಿ ಫೋರ್ಸ್(KSISF) ಘಟಕದ ರಚನೆ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಿರುತ್ತದೆ.

i. ಸದರಿ ಪಡೆಯ ವೆಚ್ಚವನ್ನು ಸರ್ಕಾರಿ/ಸಾರ್ವಜನಿಕ ನಿಯಂತ್ರಣದ ಸಂಸ್ಥೆಗಳಿಗೆ/ ನೀರಾವರಿ ಯೋಜನೆಗಳಿಗೆ/ ವಿದ್ಯುತ್ ಯೋಜನೆಗಳಿಗೆ ಮತ್ತಿತರೇ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳಿಗೆ ವಾಸ್ತವವಾಗಿ ಖರ್ಚಾಗುವ ಮೊತ್ತ ಹಾಗೂ ಆ ಮೊತ್ತದ ಮೇಲೆ ಶೇ. 15 ರಷ್ಟನ್ನು ಸೇರಿಸಿ, ಆ ಒಟ್ಟಾರೆ ಮೊತ್ತವನ್ನು ಅಂತಹ ಸಂಬಂಧಿಸಿದ ಸಂಸ್ಥೆಗಳಿಂದ ವಸೂಲು ಮಾಡತಕ್ಕದ್ದು.

ii. ಸದರಿ ಪಡೆಯ ವೆಚ್ಚವನ್ನು ಖಾಸಗಿ ನಿಯಂತ್ರಣದ ಕಂಪನಿಗಳಿಗೆ ಒದಗಿಸಿದಲ್ಲಿ ವಾಸ್ತವವಾಗಿ ಖರ್ಚಾಗುವ ಮೊತ್ತ ಹಾಗೂ ಆ ಮೊತ್ತದ ಮೇಲೆ ಶೇ. 20 ರಷ್ಟನ್ನು ಸೇರಿಸಿ, ಆ ಒಟ್ಟಾರೆ ಮೊತ್ತವನ್ನು ಸಹ ಸಂಬಂಧಿಸಿದ ಸಂಸ್ಥೆಗಳಿಂದ ವಸೂಲು ಮಾಡತಕ್ಕದ್ದು.

iii. ಈ ಪಡೆಯ ಸೇವೆಯನ್ನು ನಿಯೋಜನೆ ಮಾಡುವ ಮೊದಲು ಆ ಸಂಸ್ಥೆಗಳಿಗಿರುವ ಬೆದರಿಕೆಯ ತೀವ್ರತೆ ಹಾಗೂ ಪ್ರಾಮುಖ್ಯತೆಯನ್ನು ಪೊಲೀಸ್ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಪರಿಗಣಿಸತಕ್ಕದ್ದು.

iv. ಈ ಪಡೆಯ ಸೇವೆಯನ್ನು ಪಡೆಯುವ ಸಂಸ್ಥೆಗಳು ಹೊರಗುತ್ತಿಗೆ ಆಧಾರದ ಮೇಲೆ ಪಡೆದಿರುವ ರಕ್ಷಣಾ ಸಿಬ್ಬಂದಿಗಳನ್ನು ಆ ಸಂಸ್ಥೆಯ ಪರಿಧಿಯ ಭದ್ರತೆಗಾಗಿ ಉಪಯೋಗಿಸಿಕೊಂಡು ಈ ವಿಶೇಷ ಪಡೆಯ ಸಿಬ್ಬಂದಿಗಳನ್ನು ಕೇವಲ ಪ್ರಮುಖ ಪ್ರದೇಶಗಳ ಮಹತ್ವದ ಸ್ಥಾವರಗಳನ್ನು ಕಾಯಲು ಮಾತ್ರ (to guard the core areas of vital installations) ಉಪಯೋಗಿಸಿಕೊಳ್ಳುವ ಬಗ್ಗೆ ಪ್ರೋತ್ಸಾಹಿಸತಕ್ಕದ್ದು.

v. ಸರ್ಕಾರಿ ಸ್ವಾಮ್ಯದ ಯೋಜನೆಗಳ ಭದ್ರತೆಗೆ ಆದ್ಯತೆ ಮೇರೆಗೆ ಪ್ರಸ್ತಾಪಿತ ಕರ್ನಾಟಕ ಸ್ಟೇಟ್ ಇಂಡಸ್ಟ್ರಿಯಲ್ ಸೆಕ್ಯೂರಿಟಿ ಫೋರ್ಸ್ ಘಟಕಕ್ಕೆ ವಹಿಸತಕ್ಕದ್ದು. ಆದಾಗ್ಯೂ ಈ ಪಡೆಯಲ್ಲಿ ಯಾವುದೇ ಸಮಯದಲ್ಲಿ ಹೆಚ್ಚುವರಿ ಸಿಬ್ಬಂದಿಗಳ ಲಭ್ಯತೆ ಇದ್ದಲ್ಲಿ ಪೊಲೀಸ್ ಮಹಾ ನಿರ್ದೇಶಕರು

ಮತ್ತು ಆರಕ್ಷಕ ಮಹಾ ನಿರೀಕ್ಷಕರು ಸರ್ಕಾರಿ ಸ್ವಾಮ್ಯದ ಯೋಜನೆಗಳ ರಕ್ಷಣೆ ಅವಶ್ಯಕತೆ ಮತ್ತು ಬೇಡಿಕೆಯನ್ನು ಪೂರೈಸಿದ ನಂತರ, ಹೆಚ್ಚಿನ ಬೆದರಿಕೆ ಎದುರಿಸುತ್ತಿರುವ ಖಾಸಗಿ ಕಂಪನಿಗಳಿಗೆ ರಕ್ಷಣೆಗಾಗಿ ಸಿಬ್ಬಂದಿಯನ್ನು ನಿಯೋಜಿಸುವ ಬಗ್ಗೆ ಪರಿಗಣಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಎಫ್‌ಡಿ 44 ವೆಚ್ಚ-11/2010ರ ದಿನಾಂಕ : 28-05-2010 ಮತ್ತು ಸಂಖ್ಯೆ : ಎಫ್‌ಡಿ 273 ವೆಚ್ಚ-11/10ರ ದಿನಾಂಕ : 15/09/2010ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಎಂ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

## ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 05 ಪಿಓಪಿ 2011, ದಿನಾಂಕ : 14/01/2011 ರ ಅನುಬಂಧ- I

**ಕರ್ನಾಟಕ ಸ್ಟೇಟ್ ಇಂಡಸ್ಟ್ರಿಯಲ್ ಸೆಕ್ಯೂರಿಟಿ ಫೋರ್ಸ್‌ಗೆ ಸೃಜಿಸಲು ಮಂಜೂರಾತಿ ನೀಡಿದ ಕಾರ್ಯಕಾರಿ ಮತ್ತು ಲಿಪಿಕ ಹುದ್ದೆಗಳು ಹಾಗೂ ಅವುಗಳಿಗೆ ತಗಲುವ ಅಂದಾಜು ವಾರ್ಷಿಕ ವೆಚ್ಚದ ವಿವರ**

**ಎ. ಕಾರ್ಯಕಾರಿ ಹುದ್ದೆಗಳು :**

| ಕ್ರ. ಸಂ. | ಹುದ್ದೆಯ ಹೆಸರು ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | 1 ತಿಂಗಳಿಗೆ ತಗಲುವ ಅಂದಾಜು ವೆಚ್ಚ (ರೂ.ಗಳಲ್ಲಿ) | 1 ವರ್ಷಕ್ಕೆ ತಗಲುವ ಅಂದಾಜು ವೆಚ್ಚ (ರೂ.ಗಳಲ್ಲಿ) |
|---|---|---|---|---|
| 1 | ಕಮಾಂಡೆಂಟ್<br>18150-26925 | 1 | 37714 | 452568 |
| 2 | ಡೆಪ್ಯೂಟಿ ಕಮಾಂಡೆಂಟ್<br>16400-26250 | 1 | 35700 | 428400 |
| 3 | ಅಸಿಸ್ಟೆಂಟ್ ಕಮಾಂಡೆಂಟ್<br>14050-25050 | 8 | 262024 | 3144288 |
| 4 | ಆರ್.ಪಿ.ಐ<br>10800-20025 | 24 | 621264 | 7455168 |
| 5 | ಆರ್.ಎಸ್.ಐ<br>10000-18150 | 66 | 1571790 | 18861480 |
| 6 | ಎಆರ್‌ಎಸ್‌ಐ<br>7275-13350 | 126 | 2213820 | 26565840 |
| 7 | ಎ.ಹೆಚ್.ಸಿ./ಹೆಚ್.ಸಿ. (ವೈರ್‌ಲೆಸ್)<br>6250-12000 | 155 | 2417690 | 29012280 |
| 8 | ಎಪಿಸಿ/ಪಿ.ಸಿ. ವೈರ್‌ಲೆಸ್<br>5800-10500 | 577 | 8065883 | 96790596 |
| 9 | ಫಾಲೋಯರ್ಸ್ (ವಾಟರ್ ಕ್ಯಾರಿಯರ್ಸ್, ಸ್ವೀಪರ್ಸ್, ಕುಕ್, ಡೋಬಿಸ್ & ಬಾರ್ಬರ್)<br>5200-8200 | 69 | 788118 | 9457416 |
| | ಒಟ್ಟು | 1027 | | 19,21,68,036 |

**ಬಿ. ಲಿಪಿಕ ಹುದ್ದೆಗಳು :**

| ಕ್ರ. ಸಂ. | ಹುದ್ದೆಯ ಹೆಸರು ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | 1 ತಿಂಗಳಿಗೆ ತಗಲುವ ಅಂದಾಜು ವೆಚ್ಚ (ರೂ.ಗಳಲ್ಲಿ) | 1 ವರ್ಷಕ್ಕೆ ತಗಲುವ ಅಂದಾಜು ವೆಚ್ಚ (ರೂ.ಗಳಲ್ಲಿ) |
|---|---|---|---|---|
| 1 | ಆಡಳಿತಾಧಿಕಾರಿ<br>14050-25050 | 1 | 32753 | 393036 |
| 2 | ಸಹಾಯಕ ಆಡಳಿತಾಧಿಕಾರಿ<br>11400-21600 | 1 | 27740 | 332880 |
| 3 | ಶಾಖಾಧೀಕ್ಷಕರು<br>10000-18150 | 2 | 51870 | 622440 |
| 4 | ಪ್ರ.ದ.ಸ<br>7275-13350 | 6 | 104814 | 1257768 |

| | | | | |
|---|---|---|---|---|
| 5 | ದ್ವಿ.ದ.ಸ.<br>5800–10500 | 8 | 111032 | 1332384 |
| 6 | ಶೀಘ್ರಲಿಪಿಗಾರ<br>7275–13350 | 2 | 35178 | 422136 |
| 7 | ಬೆರಳಚ್ಚುಗಾರ<br>5800–10500 | 2 | 27938 | 335256 |
| 8 | ದಲಾಯತ್<br>4800–7275 | 8 | 82976 | 995712 |
| 9 | ಡಾಕ್ಟರ್<br>14050–25050 | 1 | 32753 | 393036 |
| 10 | ಫಾರ್ಮಸಿಸ್ಟ್<br>8825–16000 | 1 | 20956 | 251472 |
| 11 | ನರ್ಸ್<br>8825–16000 | 1 | 20956 | 251472 |
| | ಒಟ್ಟು | 33 | | 65,87,592 |

ಎ. ಕಾರ್ಯಕಾರಿ ಸಿಬ್ಬಂದಿಗಳ ಸೃಜನೆಗೆ ತಗಲುವ ಒಟ್ಟು ವೆಚ್ಚ : **ರೂ. 19,21,68,036**
ಬಿ. ಲಿಪಿಕ ಸಿಬ್ಬಂದಿಗಳ ಸೃಜನೆಗೆ ತಗಲುವ ಒಟ್ಟು ವೆಚ್ಚ : **ರೂ. 65,87,592**
ಒಟ್ಟು ವೆಚ್ಚ : **ರೂ. 19,87,55,628**

**ಬಿ.ಎಂ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

**ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 05 ಪಿಓಪಿ 2011, ದಿನಾಂಕ : 14/01/2011 ರ ಅನುಬಂಧ– ಋಋ**
**ಕರ್ನಾಟಕ ಸ್ಟೇಟ್ ಇಂಡಸ್ಟ್ರೀಯಲ್ ಸೆಕ್ಯೂರಿಟಿ ಫೋರ್ಸ್‌ಗೆ ಮಂಜೂರು ಮಾಡಿರುವ ಸಾರಿಗೆ, ವೈರ್‌ಲೆಸ್ ಸಾಧನಗಳು ಹಾಗೂ ಶಸ್ತ್ರಾಸ್ತ್ರ ಮತ್ತು ಮದ್ದುಗುಂಡುಗಳ ಅಂದಾಜು ಅನಾವರ್ತಕ ವೆಚ್ಚದ ವಿವರ**

| Sl. No. | Details | Quantity | Rate (in Rs.) | Total (in Rs.) |
|---|---|---|---|---|
| 1) | Innova Car | 2 Nos. | 10,00,000–00 | 20,00,000–00 |
| 2) | Ambassador Car | 2 Nos. | 5,00,000–00 | 10,00,000–00 |
| 3) | Jeep | 8 Nos. | 4,76,000–00 | 38,08,000–00 |
| 4) | Minibus | 4 Nos. | 14,00,000–00 | 56,00,000–00 |
| 5) | Buses | 4 Nos. | 13,65,000–00 | 54,60,000–00 |
| 6) | Trucks | 2 Nos. | 7,50,000–00 | 15,00,000–00 |
| 7) | Motorcycles | 30 Nos. | 52,000–00 | 15,60,000–00 |
| 8) | Ambulance | 1 Nos. | 8,00,000–00 | 8,00,000–00 |
| ವೈರ್‌ಲೆಸ್ ಸಲಕರಣೆಗಳು **WIRELESS EQUIPMENTS** | | | | |
| 1) | HF sets | 2 Set | 1,50,000–00 | 3,00,000–00 |
| 2) | Duplex sets | 2 Set | 60,000–00 | 1,20,000–00 |
| 3) | 20W VHF sets | 15 Sets | 12,000–00 | 1,80,000–00 |
| 4) | 2W VHF sets | 30 Sets | 12,000–00 | 3,60,000–00 |
| ಶಸ್ತ್ರಾಸ್ತ್ರ ಮತ್ತು ಮದ್ದುಗುಂಡುಗಳು **ARMS AND AMMUNITION** | | | | |
| 1) | SLR | 175 Nos. | 28,350–00 | 49,61,250–00 |
| 2) | Pistol 9mm | 30 Nos. | 15,000–00 | 4,50,000–00 |
| 3) | 9mm Carbine | 50 Nos. | 14,000–00 | 7,00,000–00 |
| 4) | Mortars 51mm | 10 Nos. | 82,286–00+ 12.5 Vat | 8,22,860–00+12.5 Vat |
| 5) | L MGs | 10 Nos. | 2,121–00 | 21,210–00 |

| | | | | |
|---|---|---|---|---|
| 6) | 7.62 mm SLRs (with SOL. Tube attachment) | 10 Nos. | 28,350–00 | 2,83,500–00 |
| 7) | Office Building | | | 3,00,00,000–00 |
| | | | **Total** | **5,99,26,820–00** |

**ಬಿ.ಎಂ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

**ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 05 ಪಿಓಪಿ 2011, ದಿನಾಂಕ : 14/01/2011 ರ ಅನುಬಂಧ– III**

**ಕರ್ನಾಟಕ ಸ್ಟೇಟ್ ಇಂಡಸ್ಟ್ರಿಯಲ್ ಸೆಕ್ಯೂರಿಟಿ ಫೋರ್ಸ್‌ಗೆ ಮಂಜೂರಾದ ವಾಹನಗಳ ನಿರ್ವಹಣೆಯ ಅಂದಾಜು ಅನಾವರ್ತಕ ವೆಚ್ಚದ ವಿವರ**

**(POL CHARGES, MAINTENANCE CHARGES)**

| ಕ್ರ. ಸಂ. | ವಾಹನದ ಹೆಸರು | ಒಂದು ವಾಹನಕ್ಕೆ ಒಂದು ವರ್ಷಕ್ಕೆ ತಗಲುವ ಇಂಧನದ ಅಂದಾಜು ವೆಚ್ಚ | ಒಂದು ವಾಹನಕ್ಕೆ ಒಂದು ವರ್ಷಕ್ಕೆ ತಗಲುವ ನಿರ್ವಹಣೆಯ ಅಂದಾಜು ವೆಚ್ಚ | 3+4ರ ಒಟ್ಟು ಮೊತ್ತ | ಪ್ರಸ್ತಾವನೆಯ ಒಟ್ಟು ವಾಹನಗಳ ಸಂಖ್ಯೆ | ವಾಹನಗಳ ಪ್ರಸ್ತಾವನೆಗಳಿಗೆ ತಗಲುವ ಒಟ್ಟು ಮೊತ್ತದ ಅಂದಾಜು ಪಟ್ಟಿ |
|---|---|---|---|---|---|---|
| 1) | ಇನೋವ ಕಾರು | ರೂ. 78,000–00 | ರೂ. 1,50,000–00 | ರೂ. 2,28,000–00 | 02 | ರೂ. 456000 |
| 2) | ಅಂಬಾಸಿಡರ್ ಕಾರು | ರೂ. 78,000–00 | ರೂ. 1,50,000–00 | ರೂ. 2,28,000–00 | 02 | ರೂ. 456000 |
| 3) | ಜೀಪು | ರೂ. 78,000–00 | ರೂ. 1,00,000–00 | ರೂ. 1,78,000–00 | 08 | ರೂ. 1424000 |
| 4) | ಮಿನಿ ಬಸ್ | ರೂ. 66,000–00 | ರೂ. 1,50,000–00 | ರೂ. 2,16,000–00 | 04 | ರೂ. 864000 |
| 5) | ಬಸ್ | ರೂ. 66,000–00 | ರೂ. 1,50,000–00 | ರೂ. 2,16,000–00 | 04 | ರೂ. 86,4000 |
| 6) | ಟ್ರಕ್ | ರೂ. 60,000–00 | ರೂ. 1,50,000–00 | ರೂ. 2,10,000–00 | 02 | ರೂ. 420000 |
| 7) | ಮೋಟಾರ್ ಸೈಕಲ್ | ರೂ. 24,000–00 | ರೂ. 20,000–00 | ರೂ. 44,000–00 | 30 | ರೂ. 1320000 |
| 8) | ಅಂಬುಲೆನ್ಸ್ | ರೂ, 24,000–00 | ರೂ. 1,00,000–00 | ರೂ. 1,24,000–00 | 01 | ರೂ. 124000 |
| | | | | | ಒಟ್ಟು | ರೂ.59,28,000 |

**ಬಿ.ಎಂ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

**ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 05 ಪಿಓಪಿ 2011, ದಿನಾಂಕ : 14/01/2011 ರ ಅನುಬಂಧ– IV**

**ಕರ್ನಾಟಕ ಸ್ಟೇಟ್ ಇಂಡಸ್ಟ್ರಿಯಲ್ ಸೆಕ್ಯೂರಿಟಿ ಫೋರ್ಸ್‌ಗೆ ಮಂಜೂರಾದ ಸಮವಸ್ತ್ರ ಮತ್ತು ಕಿಟ್ ಸಾಮಗ್ರಿಗಳ ಅಂದಾಜು ವೆಚ್ಚದ ವಿವರ**

**UNIFORM AND KIT ARTICLES**

| Sl. No. | Ranks | Total No. of items | Strength | Approximate Unit Cost+tax (per each PA) Rs. Ps.. | Total Amount+Tax (in Rs.) |
|---|---|---|---|---|---|
| 1. | RSI | 15 Items | 66 | 1051-34 | 69,388-00 |
| 2. | ARSI | | 126 | 1051-34 | 1,32,469-00 |
| 3. | AHC/HC | 32 Items | 155 | 1705-27 | 2,64,317-00 |
| 4. | APC/PC | | 577 | 1705-27 | 9,83,941-00 |
| | TOTAL | | *924 | | 14,50,115-00 |

- Kit articles are supplied to Police Personnel from the rank of APCs to RSIs only.

**ಬಿ.ಎಂ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

ಪಿ. ಆರ್. 277

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

**ವಿಷಯ** : ಇಲಾಖಾ ಮುಂಬಡ್ತಿ ಸಮಿತಿಗಳನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ** : 1. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ : ಸಿಆಸುಇ 05 ಎಸ್‌ಆರ್‌ಸಿ 84 ದಿ: 9–10–1985

2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 64 ಸೇನೆನಿ 96, ದಿ: 6–12–1996.

3. ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 4 ಸ್ವೀಮರ 2010, ದಿ: 13–1–2010.

4. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 46 ಸೇಇವಿ 2008, ದಿ: 11–2–2010.

5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 75 ಸೇನೆನಿ 2010, ದಿ: 19–5–2010.

**ಪ್ರಸ್ತಾವನೆ :**

ಮೇಲೆ (2)ರಲ್ಲಿ ಓದಲಾದ ದಿ: 6–12–1996ರ ಸರ್ಕಾರದ ಆದೇಶದಲ್ಲಿ ಜ್ಯೇಷ್ಠತೆ ಮತ್ತು ಅರ್ಹತೆಯ ಆಧಾರದ ಮೇಲೆ ರಾಜ್ಯ ಸಿವಿಲ್ ಸೇವೆಯ ಹುದ್ದೆಗಳಿಗೆ ಮುಂಬಡ್ತಿ ನೀಡುವ ಉದ್ದೇಶಗಳಿಗಾಗಿ ಇಲಾಖಾ ಮುಂಬಡ್ತಿ ಸಮಿತಿಗಳನ್ನು ರಚಿಸುವ ಬಗ್ಗೆ ಮಾರ್ಗಸೂಚಿಗಳನ್ನು ನೀಡಿದೆ. ಅದರಂತೆ ಮೇಲೆ (3) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಅಧೀನ ಇಲಾಖೆಗಳಿಗೆ ಸಂಬಂಧಿಸಿದಂತೆ **ಗ್ರೂಪ್–ಎ–ಕಿರಿಯ ಶ್ರೇಣಿಯಿಂದ ಗ್ರೂಪ್–ಎ–ಹಿರಿಯ ಶ್ರೇಣಿಗೆ** ಬಡ್ತಿ ನೀಡಲು ಹಾಗೂ **ಗ್ರೂಪ್–ಸಿ ಯಿಂದ ಗ್ರೂಪ್–ಬಿ ಹಾಗೂ ಗ್ರೂಪ್–ಬಿ ಸಮೂಹದಿಂದ ಗ್ರೂಪ್** ಎ ಕಿರಿಯ ಶ್ರೇಣಿಗೆ ಬಡ್ತಿ ನೀಡಲು ಇಲಾಖಾ ಮುಂಬಡ್ತಿ ಸಮಿತಿಯನ್ನು ರಚಿಸಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ದಿ: 6–12–1996 ರ ಸರ್ಕಾರದ ಆದೇಶವನ್ನು ಭಾಗಶಃ ಮಾರ್ಪಡಿಸಲು ಉದ್ದೇಶಿಸಿ, ಉಲ್ಲೇಖ (5)ರ ದಿ: 19–5–2010ರ ಸರ್ಕಾರದ ಆದೇಶದಲ್ಲಿ ಜ್ಯೇಷ್ಠತೆ ಹಾಗೂ ಅರ್ಹತೆಯ ಆಧಾರದ ಮೇಲೆ ರಾಜ್ಯ ಸಿವಿಲ್ ಸೇವೆಯ ಹುದ್ದೆಗಳಿಗೆ ಮುಂಬಡ್ತಿಯನ್ನು ಪರಿಗಣಿಸುವ ಉದ್ದೇಶಕ್ಕಾಗಿ ಇಲಾಖಾ ಮುಂಬಡ್ತಿ ಸಮಿತಿಯನ್ನು ರಚಿಸಿದ್ದು, ಅದರಂತೆ ಕನ್ನಡ ಸಂಸ್ಕೃತಿ ಮತ್ತು ವಾರ್ತಾ ಇಲಾಖೆಯ ಅಧೀನ ಇಲಾಖೆಗಳಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ವಾರ್ತಾ ಇಲಾಖೆ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಗೆಜೆಟಿಯರ್ ಇಲಾಖೆ ಹಾಗೂ ಪತ್ರಾಗಾರ ಇಲಾಖೆಗಳಿಗೆ ಇಲಾಖಾ ಮುಂಬಡ್ತಿ ಸಮಿತಿಯನ್ನು ರಚಿಸಲು ಉದ್ದೇಶಿಸಲಾಗಿದೆ ಹಾಗೂ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 41 ಸ್ವೀಮರ 2011, ಬೆಂಗಳೂರು, ದಿನಾಂಕ: 8–2–2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 4 ಸ್ವೀಮರ 2010, ದಿ: 13–1–2010 ರಂದು ಹೊರಡಿಸಿದ್ದ ಆದೇಶವನ್ನು ಭಾಗಶಃ ಮಾರ್ಪಡಿಸಿ, ಜ್ಯೇಷ್ಠತೆ ಹಾಗೂ ಅರ್ಹತೆಯ ಆಧಾರದ ಮೇಲೆ ರಾಜ್ಯ ಸಿವಿಲ್ ಸೇವೆಯ ಹುದ್ದೆಗಳಿಗೆ ಮುಂಬಡ್ತಿಯನ್ನು ಪರಿಗಣಿಸುವ ಉದ್ದೇಶಕ್ಕಾಗಿ ಕನ್ನಡ, ಸಂಸ್ಕೃತಿ ವಾರ್ತಾ ಇಲಾಖೆಯ ಅಧೀನ ಇಲಾಖೆಗಳಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ವಾರ್ತಾ ಇಲಾಖೆ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಗೆಜೆಟಿಯರ್ ಇಲಾಖೆ ಹಾಗೂ ಪತ್ರಾಗಾರ ಇಲಾಖೆಗಳಿಗೆ ಸಂಬಂಧಿಸಿದಂತೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಇಲಾಖಾ ಮುಂಬಡ್ತಿ ಸಮಿತಿಯನ್ನು ರಚಿಸಲಾಗಿದೆ.

**ಕರ್ನಾಟಕ ಆಡಳಿತ ಸೇವೆಯ ಹಿರಿಯ ಶ್ರೇಣಿಗೆ ಸಮನಾದ ಮತ್ತು ಹೆಚ್ಚಿನ ವೇತನ ಶ್ರೇಣಿಯ ಎ ಸಮೂಹದ ಅಪರ ನಿರ್ದೇಶಕರು ಹಾಗೂ ಜಂಟಿ ನಿರ್ದೇಶಕರ ಹುದ್ದೆಗಳಿಗೆ ಮುಂಬಡ್ತಿ ನೀಡಲು.**

| | |
|---|---|
| ಸರ್ಕಾರದ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ | ಅಧ್ಯಕ್ಷರು |
| ಸಂಬಂಧಿತ ಇಲಾಖಾ ಮುಖ್ಯಸ್ಥರು | ಸದಸ್ಯರು |
| ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ಇಲ್ಲದಿರುವ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆಯ ಪ್ರತಿನಿಧಿ | ಸದಸ್ಯರು |

**ಕರ್ನಾಟಕ ಆಡಳಿತ ಸೇವೆಯ ಕಿರಿಯ ಶ್ರೇಣಿಗೆ ಸಮನಾದ ಉಪ ನಿರ್ದೇಶಕರು, ಹಿರಿಯ ಸಹಾಯಕ ನಿರ್ದೇಶಕರು, ಆಡಳಿತಾಧಿಕಾರಿ ಇತ್ಯಾದಿ ಹುದ್ದೆಗಳಿಗೆ ಮುಂಬಡ್ತಿ ನೀಡಲು.**

| | |
|---|---|
| ಸರ್ಕಾರದ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ | ಅಧ್ಯಕ್ಷರು |
| ಸಂಬಂಧಿತ ಇಲಾಖಾ ಮುಖ್ಯಸ್ಥರು | ಸದಸ್ಯರು |
| ಸರ್ಕಾರದ ಉಪ ಕಾರ್ಯದರ್ಶಿ, ಕನ್ನಡ ಸಂಸ್ಕೃತಿ ಮತ್ತು ವಾರ್ತಾ ಇಲಾಖೆ | ಸದಸ್ಯ ಕಾರ್ಯದರ್ಶಿ |

ಮೇಲೆ (4) ರಲ್ಲಿ ಓದಲಾದ ದಿ: 11–2–2010ರ ಅಧಿಸೂಚನೆಯಲ್ಲಿ ಎಲ್ಲ ಸಮೂಹ ಬಿ ಹುದ್ದೆಗಳಿಗೆ (ತಹಸೀಲ್ದಾರ್ ಗ್ರೇಡ್–2 ನ್ನು ಬಿಟ್ಟು) ಸಂಬಂಧಿತ ಇಲಾಖಾ ಮುಖ್ಯಸ್ಥರು ನೇಮಕಾತಿ ಪ್ರಾಧಿಕಾರವೆಂದು ಘೋಷಿಸಲಾಗಿದೆ. ಅದರಂತೆ ಗ್ರೂಪ್–ಬಿ ಹುದ್ದೆಗಳಿಗೆ ಮುಂಬಡ್ತಿ ನೀಡಲು **ಇಲಾಖಾ ಮುಖ್ಯಸ್ಥರು ಸಕ್ಷಮ ಪ್ರಾಧಿಕಾರವಾಗುತ್ತಾರೆ.** ಗ್ರೂಪ್ ಬಿ ಹುದ್ದೆಗಳಿಗೆ ಮುಂಬಡ್ತಿ ನೀಡಲು ಪೋಷಕ ವೃಂದದಲ್ಲಿನ ನೌಕರರ ಅರ್ಹತೆ ಮತ್ತು ಸೂಕ್ತತೆಯನ್ನು ಪರಿಶೀಲಿಸಲು ಇಲಾಖಾ ಮುಖ್ಯಸ್ಥರು ಆಯಾ ಇಲಾಖೆಯಲ್ಲಿನ ಹಿರಿಯ ಅಧಿಕಾರಿಗಳನ್ನೊಳಗೊಂಡ ಇಲಾಖಾ ಮುಂಬಡ್ತಿ ಸಮಿತಿಯನ್ನು ರಚಿಸಿಕೊಳ್ಳಬಹುದಾಗಿದೆ. ಇಲಾಖಾ ಮುಂಬಡ್ತಿ ಸಮಿತಿಯು ಅಗತ್ಯವಿಲ್ಲವೆಂದು ಕಂಡುಬಂದ ಪ್ರಕರಣಗಳಲ್ಲಿ ಸಂಬಂಧಿತ ನೇಮಕಾತಿ ಪ್ರಾಧಿಕಾರಗಳು ನೌಕರರ ಅರ್ಹತೆ ಮತ್ತು ಸೂಕ್ತತೆಯನ್ನು ಪರಿಗಣಿಸಿ ಸೂಕ್ತ ತೀರ್ಮಾನವನ್ನು ತೆಗೆದುಕೊಳ್ಳಬಹುದು.

ಇಲಾಖಾ ಮುಂಬಡ್ತಿ ಸಮಿತಿಗಳು ಮತ್ತು ನೇಮಕಾತಿ ಪ್ರಾಧಿಕಾರಗಳು ಮೇಲೆ (1)ರಲ್ಲಿ ಓದಲಾದ ದಿ: 9–10–1985ರ ಅಧಿಕೃತ ಜ್ಞಾಪನದಲ್ಲಿ ನೀಡಲಾದ ಮಾರ್ಗಸೂಚಿಗಳು ಮತ್ತು ಈ ಸಂಬಂಧದಲ್ಲಿ ಕಾಲಕಾಲಕ್ಕೆ ಸಿ.ಆ.ಸು.ಇ. (ಸೇವಾ ನಿಯಮಗಳು) ವಿಭಾಗವು ಹೊರಡಿಸುವ ಮಾರ್ಗಸೂಚಿಗಳನ್ವಯ ಕಾರ್ಯ ನಿರ್ವಹಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಉಪ ಕಾರ್ಯದರ್ಶಿ

ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ

ಪಿ.ಆರ್. 496

## ENERGY SECRETARIAT

**Sub :-** Capacity limitation from 3.2 MW to 2.4 MW wind power capacity in favour of M/s Enercon Wind Farms (Krishna) Limited reg.

**Read :-** 1. Government Order No. DE 20 NCE 2005 dated : 07-02-2005.
2. Government Order No: EN 90 NCE 2005 dated : 30-03-2005.
3. Letter No. EWF (Krishna) L/ACS/ED/2010-11 dated 27-01-2011 received from M/s Enercon Wind Farms (Krishna) Limited.

**Preamble:**

In the Government Order read at (1) above, sanction has been accorded for implementation of 21.4 MW capacity wind power project at Kappadgudda, Gadag District to M/s Subhash Projects & Marketing Ltd.

In the Government Order read at (2) above, sanction has been accorded for transfer of 3.2 MW wing power capacity in favour of Enercon Wind Farms (Krishna) Limited at Hirevaddatti village, Gadag District from out of 21.4 MW capacity of M/s Subhash Projects & Marketing Ltd.

M/s Enercon Wind Farms (Krishna) Limited vide its letter read at (3) above has stated that they have commissioned 2.4 MW capacities out of transferred 3.2 MW on 19.08.2006 comprising of 4 No's with 600 KW in place of 800 KW WEC's and opted for installation of 600 KW in place of 800 KW based on observing the performance of the existing project of capacity 15 MW running more than 17 months in the same locality which was commissioned much earlier to the said capacity of 2.4 MW i.e on 15.03.2005. Further requested to limit the capacity from 3.2 MW to 2.4 MW (600 KW x 4 WTG's)

The proposal has been examined in detail and hence the following order:-

**Government Order No: EN 76 NCE 2011, Bangalore, dated : 17-02-2011**

Government accords approval for the capacity limitation from 3.2 MW to 2.4 MW (600 KW x 4 WTG's) of M/s Enercon Wind Farms (Krishna) Limited as detailed below and subject to the following conditions:-

| Village Name | Taluk & District | Land Survey Number | Extent (ha) |
|---|---|---|---|
| Hirevaddatti | Mundargi Gadag | 456 | 4.00 |
| Hirevaddatti | Mundargi Gadag | 324 | 3.9 |
| | | Total | 7.9 |

The Government reserves the right to cancel/modify this order.

The other terms and conditions of the Government Order read at (1) above shall IPSO FACTO applicable.

By Order and in the name of the Governor of Karnataka
**Suresh. B. Krishnappanavar**
Under Secretary to Government
Energy Department

P.R. 497

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ** : ಮಂಗಳೂರು ಕೆಮಿಕಲ್ಸ್ ಮತ್ತು ಫರ್ಟಿಲೈಸರ್ಸ್ ಲಿ. ಸಂಸ್ಥೆಗೆ ಸರ್ಕಾರ ಬಿಡುಗಡೆ ಮಾಡಿದ ಸಾಲಗಳ ಕುರಿತು.

**ಉಲ್ಲೇಖ** : 1. ಸರ್ಕಾರಿ ಆದೇಶ ಸಂಖ್ಯೆ: ಸಿಐ 19 ಬಿಐಎಫ್ 95, ದಿ: 20–1–2010.
2 ನಿರ್ದೇಶಕರು, ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ ಋಣ ನಿರ್ವಹಣೆ ನಿರ್ದೇಶನಾಲಯ ಇವರ ಪತ್ರ ದಿನಾಂಕ: 12–11–2010.
3. ಪ್ರಧಾನ ಲೆಕ್ಕಾಧಿಕಾರಿ ಕೇಂದ್ರದವರ ಪತ್ರ ದಿನಾಂಕ: 24–1–2011.

**ಪ್ರಸ್ತಾವನೆ :**

ಮೇಲೆ ಉಲ್ಲೇಖ(1)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 20–1–2010 ರಲ್ಲಿ ಮೆ: ಮಂಗಳೂರು ಕೆಮಿಕಲ್ಸ್ ಲಿಮಿಟೆಡ್ ಸಂಸ್ಥೆಯ ಸರ್ಕಾರಿ ಸಾಲ ಬಾಕಿಯು ಬಡ್ಡಿ ಸೇರಿ ರೂ. 14,59,00,000 ಎಂದು ಪರಿಗಣಿಸಲಾಗಿದೆ.

ಈ ಮೊತ್ತವನ್ನು ಸಂಸ್ಥೆಯು ಸರ್ಕಾರದ ಲೆಕ್ಕ ಶೀರ್ಷಿಕೆ '6855' ಕ್ಕೆ ಪಾವತಿಸಿರುತ್ತಾರೆ. ಸದರಿ ಮೊಬಲಗನ್ನು ಈ ಕೆಳಕಂಡ ಲೆಕ್ಕ ಶೀರ್ಷಿಕೆಗೆ ಹೊಂದಾಣಿಕೆ ಮಾಡಿಕೊಳ್ಳುವಂತೆ ಮಹಾಲೇಖಪಾಲರು [ಎ ಮತ್ತು ಇ] ಹಾಗೂ ಮಹಾಲೇಖಪಾಲರು (ಡಬ್ಲುಎಫ್ ಮತ್ತು ಆರ್‌ಎ) ರವರಿಗೆ ತಿಳಿಸಲು ಅವಶ್ಯ ಆದೇಶ ಹೊರಡಿಸುವಂತೆ ನಿರ್ದೇಶಕರು, ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ ಋಣ ನಿರ್ವಹಣೆ ನಿರ್ದೇಶನಾಲಯ ಇವರು ಉಲ್ಲೇಖ(2)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಸರ್ಕಾರವನ್ನು ಕೋರಿದ್ದಾರೆ. ಅದರನ್ವಯ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ: 19 ಬಿಐಎಫ್ 05, ಬೆಂಗಳೂರು, ದಿನಾಂಕ: 11–2–2011**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮೆ: ಮಂಗಳೂರು ಕೆಮಿಕಲ್ಸ್ ಮತ್ತು ಫರ್ಟಿಲೈಜರ್ಸ್ ಲಿ. ಸಂಸ್ಥೆಯು ಸರ್ಕಾರಕ್ಕೆ ಪಾವತಿಸಿರುವ ರೂ. 14,59,00,000 ಮೊತ್ತವನ್ನು ಈ ಕೆಳಕಂಡ ಲೆಕ್ಕ ಶೀರ್ಷಿಕೆಗೆ ಹೊಂದಾಣಿಕೆ ಮಾಡಿಕೊಳ್ಳುವಂತೆ ಆದೇಶಿಸಲಾಗಿದೆ.

ಲೆಕ್ಕ ಶೀರ್ಷಿಕೆ : 6855–00–190–0–01 ಅಸಲು ರೂ. 10,49,00,000
ಲೆಕ್ಕ ಶೀರ್ಷಿಕೆ : 0049–04–190–0–01 ಬಡ್ಡಿ ರೂ. 4,10,00,000

ಈ ಬಗ್ಗೆ ಮಾಹಾಲೇಖಪಾಲರು [ಎ ಮತ್ತು ಇ] ಹಾಗೂ (ಡಬ್ಲುಎಫ್ ಮತ್ತು ಆರ್‌ಎ) ಇವರು ಅಗತ್ಯ ಕ್ರಮ ತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಂ. ಎಸ್. ಗಣಪತಿ)**
ಸರ್ಕಾರದ ಉಪ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 498

## INFRASTRUCTURE DEVELOPMENT SECRETARIAT

**Sub :-** Release of funds for the improvement of roads for the Aero India-2011

**Read :-** 1. CE/MR/AEROSHOW/350/2010-11 dated 19.1.2011 of the Commissioner, BBMP.

2. Proceedings of the meeting held on 10-01-2011 under the Chairmanship of Chief Secretary, GoK to review the preparations for the Aero India 2011.

3. Notification No. FD 109 Exp. 12/11 dated 1-02-2011.

4. G.O. No. FD 275 BRS 2010 dated 4-02-2011.

**Preamble:**

In a meeting held on 10-01-2011 under the Chairmanship of Chief Secretary, Government of Karnataka, to review the preparations for Aero India 2011 to be held from 9th to 13th February 2011 at Air Force Station, Yelahanka, Bangalore, the Chief Secretary had directed BBMP to take up the development of roads from Ambience Dhaba to Doddaballapur and MVIT Gate to Rajanakunte and to start the work immediately. Further, Infrastructure Development Department (IDD) was instructed to move a suitable proposal to Finance Department (FD) after receiving the estimates from BBMP for granting exemption under 4(g) of KTPP Act and also for providing additional funds to meet the expenditure for development of these roads under IDD's budget. Accordingly in his letter dated 19-01-2011 read at Sl. No. (1) above, the Commissioner, BBMP in his letter has sent a proposal along with the estimates furnished by KRIDL for granting exemption under 4(g) of KTPP Act for developing the following roads and has also requested release of Rs. 18,25,36,000/- being the estimated expenditure. The Commissioner BBMP has stated that the development work of the below mentioned roads have commenced from 12-01-2011 and are in progress.

| Sl. No. | Works | Estimated cost |
|---|---|---|
| 1. | Widening Improvements, Strengthening and Asphalting of Road from Doddaballapur Main Road at Rajanakunte to NH-7 via MVIT College Road from Ch: 02.50 km. | Rs. 2,96,80,000/- |
| 2. | Widening Improvements, Strengthening and Asphalting of Road from Doddaballapur Main Road at Rajanakunte to NH-7 via MVIT College Road from Ch: 02.50 km. to 7.20 km | Rs. 2,90,00,000/- |
| 3. | Improvements, Strengthening and Asphalting of Road from Doddaballapur Main Road to NH-7 at Ambiance Dhaba via Ryan International School from Ch: 0.00 km. to 3.00 km | Rs. 2,99,90,000/- |
| 4. | Improvements, Strengthening and Asphalting of Road from Doddaballapur Main Road to NH-7 at Ambiance Dhaba via Ryan International School from Ch: 3.00 km. to 7.50 km | Rs. 2,99,70,000/- |
| 5. | Widening Improvements, Strengthening and Asphalting of MVIT college road to the junction of Doddaballapur Main Road via Nagadasanahalli from Ch: 0.00 to 2.00 km. and Road from Nagadasanahalli to Gantaganahalli via Muddenahalli from Ch: 2.00 to 4.00 km | Rs. 3,40,00,000/- |
| 6. | Widening, Improvements, Strengthening, and Asphalting of Road from the junction of MVIT college road to the junctionof Ryan International School road at Gantaganahalli from Ch: 0.00 to 2.20 kms. | Rs. 2,96,95,000/- |

2.The proposal of Commissioner, BBMP for granting exemption under 4(g) KTPP Act for the above works and for release of funds have been considered by the Government.

3.In notification read at (3) above FD has granted exemption under section 4(g) of KTPP Act 1999, for the development of this road through KRIDL.

4. As the funds available under Alternate Roads development was insufficient, FD in its GO read at Sl. (4) has accorded sanction for re-appropriation of a sum of Rs. 1417 .00 lakhs from the Head of Account 5465-01-190-3-04 (P).

5.Hence the following Order

**Government Order No: IDD 13 DIA 2011, Bangalore, dated : 04-02-2011**

After careful consideration of the above proposal, the Government accords sanction for release of Rs. 18.25 crores (Rupees Eighteen crores twenty five lakhs only) to BBMP towards the expenditure for development of the following roads for Aero India 2011, (Rs. 408.00 lakhs (Four Hundred and eight lakhs) will be met under Head of Account 5465-01-190-2-05-211- Alternate Roads (plan) and Rs. 1,417.00 lakhs (One thousand four hundred and seventeen lakhs only) will be met through re-appropriation from the Head of Account 5465-01-190-3-04-211- Investments (plan) – K-RIDE-ROB/RUB project}

| Sl. No. | Works | Estimated cost |
|---|---|---|
| 1. | Widening Improvements, Strengthening and Asphalting of Road from Doddaballapur Main Road at Rajanakunte to NH-7 via MVIT College Road from Ch: 02.50 km. | Rs. 2,96,80,000/- |

| | | |
|---|---|---|
| 2. | Widening Improvements, Strengthening and Asphalting of Road from Doddaballapur Main Road at Rajanakunte to NH-7 via MVIT College Road from Ch: 02.50 km. to 7.20 km | Rs. 2,90,00,000/- |
| 3. | Improvements, Strengthening and Asphalting of Road from Doddaballapur Main Road to NH-7 at Ambiance Dhaba via Ryan International School from Ch: 0.00 km. to 3.00 km | Rs. 2,99,90,000/- |
| 4. | Improvements, Strengthening and Asphalting of Road from Doddaballapur Main Road to NH-7 at Ambiance Dhaba via Ryan International School from Ch: 3.00 km. to 7.50 km | Rs. 2,99,70,000/- |
| 5. | Widening Improvements, Strengthening and Asphalting of MVIT college road to the junction of Doddaballapur Main Road via Nagadasanahalli from Ch: 0.00 to 2.00 km. and Road from Nagadasanahalli to Gantaganahalli via Muddenahalli from Ch: 2.00 to 4.00 km | Rs. 3,40,00,000/- |
| 6. | Widening, Improvements, Strengthening, and Asphalting of Road from the junction of MVIT college road to the junctionof Ryan International School road at Gantaganahalli from Ch: 0.00 to 2.20 kms. | Rs. 2,96,95,000/- |

2. Exemption under section 4(g) of the KTPP Act 1999 has been granted for development of the above said 6 roads at a cost of Rs. 18.25 crores through KRIDL. If KRIDL undertakes this work through any other agency, then KTPP Act and rules are to be followed by it.

3. IDD to ensure procurement of good quality work at competitive price.

4. The Chief Accounts Officer, BBMP is authorized to draw the above amount of Rs. 18.25 crores (Rupees Eighteen crores and twenty five lakhs only) on a payees receipt counter- signed by the Under Secretary to Government, Infrastucture Development Department.

5. This order issues with the concurrence of Finance Department vide Endorsement No. FD 210 Exp-I/2011, dated 3.02.2011.

By Order and in the name of the Governor of Karnataka

**C.A. Baburavindranath Patel**

Under Secretary to Government

Infrastructure Development Department

P.R. 499

## INFRASTRUCTURE DEVELOPMENT SECRETARIAT

**Sub :-** Constitution of a Committee to review the reports submitted by Capita Symonds in connection with the preparation of DPR for MonoRail/LRT/ any other appropriate system.

**Read :-** 1. G.O. No. ನ.ಅ.ಇ. 320 ಬಿ.ಎಂ.ಆರ್. 2008 dated 03-04-2000

2. G.O. No. IDD 90 ITS 2010 dated 16-08-2010.

**Preamble:**

In the G.O. dated 03-04-2009 read at Sl. No. (2) above, sanction has been accorded appointing BARL as special purpose vehicle to undertake the MonoRail projects in Bangalore and any part of the State subject to certain conditions mentioned therein.

As per the said Government Order, BARL has taken the role of a nodal agency to undertake the procurement activities to procure consultancy to prepare DPR for the MonoRail/ LRT systems and BARL has initiated the process to procure the consultants and completed the process by release of Letter of Award in favour of M/s Capita Symonds, being the preferred bidder.

The Director (Projects) BARL has requested to constitute a committee to review the reports submitted by the consultants and others in the matter of implementation of the MonoRail/LRT/ any other appropriate system and advise BARL appropriately on the way forward to develop the project.

Hence this Order.

**Government Order No: IDD 90 ITS 2010, Bangalore, dated : 08-02-2011**

In the circumstances, explained in the preamble, a Committee is constituted to reiew the report submitted by Capita Symonds in connection with the preparation of DPR for MonoRail/LRT/ any other appropriate system with the following members.

i) Shri C. Jayaram-Director (Tech), BARL, Bangalore
ii) Shri K.L. Lokanatha- Director, PPP cell, IDD, Bangalore.
iii) Shri Rabindra K Sahu – PPP Expert, PPP cell, IDD, Bangalore.
iv) Shri N.R.N. Simha, DGM (IPD), KSIIDC, Bangalore.
v) Shri Shivananda Hiremath – EE, BARL, Bangalore.
vi) Shri Robin, SY, Associate, M/s iDeck, Bangalore.
vii) Shri Shailendra Singh, Special Officer, Dult, Bangalore.

The Review Committee shall carry out scrutiny of the reports in accordance with evaluation criteria indicated in RFP document and in accordance with the provisions contained in the KTPP Act and rules. The Review Committee shall ensure the confidentiality of the process.

By Order and in the name of the Governor of Karnataka

**R. Shivalingaiah**

Under Secretary to Government PPP cell

Infrastructure Development Department

P.R. 500

## ಇಂಧನ ಸಚಿವಾಲಯ

**ವಿಷಯ** : ಮೆ. ಶ್ರೀ ಮಾರುತಿ ಪವರ್ ಜೆನ್ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಕಂಪನಿಯ 19.00 ಮೆಗಾ ವ್ಯಾಟ್ ಸಾಮರ್ಥ್ಯದ ಯೆಡಕುಮೆರಿ ಕಿರು ಜಲ ವಿದ್ಯುತ್ ಯೋಜನೆಯನ್ನು 24.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ** : 1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 227 ಎನ್‌ಸಿಇ 2007 ದಿನಾಂಕ: 05–10–2007.

**2.** ಸರ್ಕಾರಿ ಆದೇಶ ಸಂಖ್ಯೆ: ಇಎನ್ 227 ಎನ್‌ಸಿಇ 2007 ದಿನಾಂಕ: 29–11–2007.

**3.** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಯೆಡಕುಮೆರಿ/ಎಂಹೆಚ್‌ಎಸ್/2010/2317 ದಿನಾಂಕ: 03/05–08–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಮೆ. ಶ್ರೀ ಮಾರುತಿ ಪವರ್ ಜೆನ್ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ಯೆಡಕುಮೆರಿ ಗ್ರಾಮದ ಹೊಂಗಡಹಳ್ಳ ನದಿಯ ಬಲ ದಂಡೆಯಲ್ಲಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಯೆಡಕುಮೆರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ಆದೇಶದಲ್ಲಿ ಯೋಜನೆಯ ಸಾಮರ್ಥ್ಯವನ್ನು 4.00 ಮೆಗಾ ವ್ಯಾಟ್‌ನಿಂದ 19.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಪ್ರಸ್ತುತ 19.00 ಮೆಗಾ ವ್ಯಾಟ್ ಸಾಮರ್ಥ್ಯದ ಯೆಡಕುಮೇರಿ ಕಿರು ಜಲ ವಿದ್ಯುತ್ ಯೋಜನಾ ಸ್ಥಳದಲ್ಲಿ 8.00 ಮೆಗಾ ವ್ಯಾಟ್ ಸಾಮರ್ಥ್ಯದ 3 ಘಟಕಗಳನ್ನು ಸ್ಥಾಪಿಸಲು ನೀರಿನ ಲಭ್ಯತೆ ಇರುವ ಹಿನ್ನೆಲೆಯಲ್ಲಿ ಕೆಲವೊಂದು ಷರತ್ತಿಗೊಳಪಟ್ಟು ಸಾಮರ್ಥ್ಯ ಹೆಚ್ಚಳಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 354 ಎನ್‌ಸಿಇ 2010, ಬೆಂಗಳೂರು, ದಿನಾಂಕ: 17–02–2011**

ಮೆ. ಶ್ರೀ ಮಾರುತಿ ಪವರ್ ಜೆನ್ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲೂಕಿನ ಯೆಡಕುಮೆರಿ ಗ್ರಾಮದ ಹೊಂಗಡಹಳ್ಳ ನದಿಯ ಬಲ ದಂಡೆಯಲ್ಲಿ ಹಂಚಿಕೆ ಮಾಡಿರುವ 19.00 ಮೆಗಾ ವ್ಯಾಟ್ ಸಾಮರ್ಥ್ಯದ ಯೆಡಕುಮೇರಿ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 24.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಈ ಕೆಳಗಿನ ಷರತ್ತಿಗೊಳಪಟ್ಟು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ:–

1. One more small hydro project which has been allotted to M/s Maruthi Power Gen (India) Pvt. Ltd. at the same location on the bank of Hongadahalla stream vide GO. No. EN 392 NCE 2006 dated : 17-03-2007 (5MW) and capacity enhanced from 5 MW to 18.9 MW vide Government Order No: EN 299 NCE 2007 dated : 04-09-2007. These two projects should be treated as separate project and not to be clubbed. Separate power houses, switch yard etc. are to be set up.
2. No further Government land including Forest land will be made available.
3. The other terms and conditions of the Government Order read at (1) above shall IPSO FACTO applicable.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

ಪಿ.ಆರ್. 501

## COMMERCE AND INDUSTRIES SECRETARIAT

**Sub :** Approval to the Project Proposal of M/s. SSC Steels Pvt. Ltd., to establish "70 MW Thermal Power Plant" at Hanumanahalli village, Sandur Taluk, Bellary District.

**Read :** Proceedings of the 24th State High Level Clearance Committee (SHLCC) Meeting held on 24-01-2011.

**Preamble :**

M/s. SSC Steels Pvt. Ltd., proposes to establish "70 MW Thermal Power Plant" at Hanumanahalli village, Sandur Taluk, Bellary District, with an investment of Rs. 330 Crores, generating employment to about 270 persons.

In the 24th State High Level Clearance Committee (SHLCC) Meeting held on 24-01-2011, the proposal of the Company was discussed and approved.

Government has examined the recommendations made by the State High Level Clearance Committee in the 24th Meeting held on 24-01-2011, in all aspects.

Hence the following Order.

**GOVERNMENT ORDER NO. : CI 76 SPI 2011, BANGALORE, DATED : 24-02-2011**

Government is pleased to accord in principle approval to the Project Proposal of M/s. SSC Steels Pvt. Ltd., to establish "70 MW Thermal Power Plant" at Hanumanahalli village, Sandur Taluk, Bellary District, with an investment of of Rs. 330 Crores, generating employment to about 270 persons and extend the following infrastructure facilities, incentives and concessions.

**INFRASTRUCTURE FACILITIES :**

1. **Land :** The Committee noted that the Company will establish the project in the existing land at Hanumanahalli Village, Sandur Taluk, Bellary District.
2. **Water :** 2000 KLPD from own borewells. 3000 KLPD from recycled water. 50 KLPD from rain water harvesting.
3. **Power :** 2,000 KVA to be serviced by GESCOM.
4. **Incentives and Concessions :** As per applicable G.O.

**GENERAL TERMS AND CONDITIONS :**

1. **Environment :** The promoters to obtain CFE and CFO from KSPCB and environmental clearance from MOEF, GOI.
2. **Employment :** The company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka. A copy of Human Resources Development plan shall be sent to the Commissioner for I.D. & Director of Industries and Commerce for monitoring.
3. **Vendor Development :** Wherever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
4. **Social Infrastructure Development :** The company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
5. **Others :**
   a) The project proponents shall adopt rain water harvesting, waste water recycling and water conservation techniques. Zero discharge facility should be adopted wherever applicable.
   b) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period of two years from the date of issue.

By Order and in the name of the Governor of Karnataka

**A.V. SRINIVASA DIKSHIT**

Desk Officer (Technical Cell)

Commerce & Industries Department.

P.R. 574